## ಸೈದ್ಧಾಂತಿಕ ಭಾಷಾಭ್ಯಾಸ

**ಸಮಾಸ ಸ್ಥೂಲ ಪರಿಚಯಾತ್ಮಕ ವಿವರ**

**೧. ತತ್ಪುರುಷ ಸಮಾಸ**

**ಬೆಟ್ಟದ + ತಾವರೆ > ಬೆಟ್ಟದಾವರೆ (ಷಷ್ಠೀ ತತ್ಪುರುಷ)**

**ವಯಸ್ಸಿನಿಂದ + ವೃದ್ಧ > ವಯೋವೃದ್ಧ (ತೃತೀಯಾ ತತ್ಪುರುಷ)**

**ಹಗಲಿನಲ್ಲಿ + ಕನಸು > ಹಗಲುಗನಸು (ಸಪ್ತಮೀ ತತ್ಪುರುಷ)**

ಕೊಟ್ಟಿರುವ ಪದಗಳನ್ನು ಗಮನಿಸಿದಾಗ ಎರಡೆರಡು ಪದಗಳು ಸೇರಿ ಒಂದು ಪದವಾಗಿರುವುದು, ಪೂರ್ವಪದದ ಅಂತ್ಯದಲ್ಲಿ ವಿಭಕ್ತಿಪ್ರತ್ಯಯವಿದ್ದು ಸಮಾಸವಾಗುವಾಗ ಆ ಪ್ರತ್ಯಯಗಳು ಲೋಪವಾಗಿರುವುದು ಕಂಡುಬರುತ್ತದೆ. ಯಾವ ವಿಭಕ್ತಿಪ್ರತ್ಯಯ ಲೋಪವಾಗಿದೆಯೋ ಅದರ ಆಧಾರದಿಂದ ಸಮಾಸವನ್ನು ಹೆಸರಿಸುವರು. ಹೀಗೆ – **ಪೂರ್ವೋತ್ತರ ಪದಗಳು ನಾಮಪದಗಳಾಗಿದ್ದು ಪೂರ್ವಪದದ ಅಂತ್ಯದಲ್ಲಿರುವ ವಿಭಕ್ತಿಪ್ರತ್ಯಯ ಸಮಾಸವಾಗುವಾಗ ಲೋಪವಾದರೆ ಅದೇ ತತ್ಪುರುಷ ಸಮಾಸ. ಇದರಲ್ಲಿ ಉತ್ತರಪದದ ಅರ್ಥ ಪ್ರಧಾನ.**

**೨. ಕರ್ಮಧಾರಯ ಸಮಾಸ**

**ಹಿರಿದು + ಮರ > ಹೆಮ್ಮರ**

**ಮೆಲ್ಲಿತು + ನುಡಿ > ಮೆಲ್ನುಡಿ**

**ದಿವ್ಯವಾದ + ಪ್ರಕಾಶ > ದಿವ್ಯಪ್ರಕಾಶ**

ಇಲ್ಲಿ **ಹಿರಿದು, ಮರ, ಮೆಲ್ಲಿತು, ನುಡಿ** ಎಂಬ ನಾಲ್ಕು ಪದಗಳು ಕನ್ನಡದವು. **ದಿವ್ಯ, ಪ್ರಕಾಶ** ಎಂಬ ಎರಡು ಪದಗಳು ಸಂಸ್ಕೃತ ಪದಗಳು. ಮೂರೂ ಸಮಾಸಗಳ ಪೂರ್ವಪದಗಳು ವಿಶೇಷಣಗಳಾಗಿವೆ. **'ದಿವ್ಯ'** ಸಂಸ್ಕೃತ ಪದವಾದ ಕಾರಣ ಅರ್ಥ ಸ್ಪಷ್ಟತೆಗಾಗಿ **'ಆದ'** ಎಂಬ ಪದ ಪೂರ್ವಪದಕ್ಕೆ ಸೇರಿ **'ದಿವ್ಯವಾದ'** ಎಂಬ ಪದ ರಚನೆಯಾಗಿದೆ. ಕನ್ನಡಪದಗಳಲ್ಲಿ ಹೀಗಿರುವುದಿಲ್ಲ. ಹೀಗೆ–**ಪೂರ್ವೋತ್ತರ ಪದಗಳು ಲಿಂಗ, ವಚನ, ವಿಭಕ್ತಿಗಳಿಂದ ಸಮಾನವಾಗಿದ್ದು ವಿಶೇಷಣ–ವಿಶೇಷ್ಯ ಸಂಬಂಧದಿಂದ ಕೂಡಿ ಆಗುವ ಸಮಾಸವೇ ಕರ್ಮಧಾರಯ ಸಮಾಸ. ಇದರಲ್ಲಿ ಉತ್ತರ ಪದದ ಅರ್ಥವೇ ಪ್ರಧಾನ.**

**ಕರ್ಮಧಾರಯ** ಸಮಾಸದಲ್ಲಿ **ವಿಶೇಷಣ ಪೂರ್ವಪದ ಕರ್ಮಧಾರಯ, ಉಪಮಾನ ಪೂರ್ವಪದ** ಅಥವಾ **ಉಪಮಾನ ಪರಪದ ಕರ್ಮಧಾರಯ, ಸಂಭಾವನಾ ಪೂರ್ವಪದ ಕರ್ಮಧಾರಯ, ಅವಧಾರಣಾ ಪೂರ್ವಪದ ಕರ್ಮಧಾರಯ ಸಮಾಸ** ಎಂಬ ನಾಲ್ಕು ವಿಧಗಳಿವೆ.

### ೩. ದ್ವಿಗು ಸಮಾಸ

**ಮೂರು + ಮಡಿ > ಮುಮ್ಮಡಿ**

**ನಾಲ್ಕು + ದೆಸೆ > ನಾಲ್ದೆಸೆ**

**ಪಂಚಗಳಾದ + ಇಂದ್ರಿಯ > ಪಂಚೇಂದ್ರಿಯ**

ಈ ಮೂರು ಸಮಾಸಗಳಲ್ಲಿ ಪೂರ್ವಪದ **ಸಂಖ್ಯಾವಾಚಕ**ಗಳಾಗಿವೆ. ಮೂರನೆಯದಾದ **ಪಂಚೇಂದ್ರಿಯ** ಎಂಬ ಪದದಲ್ಲಿ ಎರಡೂ ಪದಗಳು ಸಂಸ್ಕೃತವಾದುದರಿಂದ **ಆದ** ಎಂಬ ಪದ ಪೂರ್ವಪದದೊಂದಿಗೆ ಸೇರಿಕೊಂಡಿದೆ. ಹೀಗೆ–**ಪೂರ್ವಪದ ಸಂಖ್ಯಾವಾಚಕವಾಗಿದ್ದು ಉತ್ತರಪದ ನಾಮಪದವಾಗಿದ್ದರೆ ಅದು ದ್ವಿಗು ಸಮಾಸ.**

## ಅಭ್ಯಾಸ ಚಟುವಟಿಕೆ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ತತ್ಪುರುಷ ಸಮಾಸ ಎಂದರೇನು?

೨. ಕರ್ಮಧಾರಯ ಸಮಾಸದ ವಿಧಗಳಾವುವು?

೩. ದ್ವಿಗು ಸಮಾಸ ಎಂದರೇನು? ಉದಾಹರಣೆ ಕೊಡಿ.

## ಪ್ರಾಯೋಗಿಕ ಭಾಷಾಭ್ಯಾಸ

**ಅ. ಕೊಟ್ಟಿರುವ ಸಮಾಸಪದಗಳನ್ನು ವಿಗ್ರಹಿಸಿ, ಸಮಾಸವನ್ನು ಹೆಸರಿಸಿ.**

ಚಳಿಗಾಲ ಯಜ್ಞತುರಂಗ ಬಾಯುಪಚಾರ ಸವಿಗೂಳು ಮೃಷ್ಟಾನ್ನ

ಏಕಾಕ್ಷರೀ ಪಂಚಾಕ್ಷರೀ ಮೂಜಗ ಸಪ್ತಾಕ್ಷರೀ

## ಪೂರಕ ಓದು

- **ಪ್ರೊ. ಜಿ. ವೆಂಕಟಸುಬ್ಬಯ್ಯ** ಅವರು ಸಂಪಾದಿಸಿದ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮುದ್ರಿಸಿರುವ **ಮುದ್ದಣಭಂಡಾರ – ಸಂಪುಟ ಒಂದು ಮತ್ತು ಎರಡು** ಕೃತಿಯನ್ನು ಗಮನಿಸಿ.

✦ ✦ ✦ ✦ ✦

**ಪದ್ಯ ಭಾಗ**




# ೧. ಕನ್ನಡಿಗರ ತಾಯಿ

**ರಾಷ್ಟ್ರಕವಿ ಎಂ. ಗೋವಿಂದಪೈ –**

**ಪ್ರವೇಶ :** ಜಗತ್ತಿನಲ್ಲಿರುವ ಎಲ್ಲಾ ಭಾಷೆಗಳಲ್ಲಿಯೂ ನಾಡು – ನುಡಿಯ ಮೇಲಿನ ಅಭಿಮಾನವು ಆಯಾಯ ಭಾಷೆಯ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಅಭಿವ್ಯಕ್ತಗೊಂಡಿದೆ. ಇವು ಜನಮಾನಸದ ಅಮೃತಧಾರೆಗಳಾಗಿವೆ. ನಾಡು–ನುಡಿಯ ಆತ್ಮಾಭಿಮಾನದಿಂದ ಕೂಡಿದ ದೇಶಾಭಿಮಾನವು ನಾಡಿನ ಏಳಿಗೆಗಾಗಿ ದುಡಿಯುವಂತೆ ನಮ್ಮೆಲ್ಲರನ್ನು ಪ್ರೇರೇಪಿಸುತ್ತವೆ. ಭವ್ಯ ಪರಂಪರೆಯುಳ್ಳ ಕರುನಾಡು ಅನೇಕ ಪ್ರಾಂತ್ಯಗಳಲ್ಲಿ ಹರಿದು ಹಂಚಿ ಹೋಗಿದ್ದ ಕಾಲದಲ್ಲಿ ಕರ್ನಾಟಕ ಏಕೀಕರಣದ ಕನಸನ್ನು ಕಂಡವರು ಅನೇಕರು. ಕನ್ನಡದ ಮಕ್ಕಳೆಲ್ಲ ಒಂದಾಗಿ ಬನ್ನಿ, ಉದಯವಾಗಲಿ ಚೆಲುವ ಕನ್ನಡ ನಾಡು, ಬಾರಿಸು ಕನ್ನಡ ಡಿಂಡಿಮವ, ಹಚ್ಚೇವು ಕನ್ನಡದ ದೀಪ ಎಂದೆಲ್ಲ ಅನೇಕರು ನಾಡು ನುಡಿಯ ಶ್ರೇಷ್ಠತೆ, ಪಾವಿತ್ರ್ಯತೆಯನ್ನು ಸಾರುವ ಮೂಲಕ ನವೋದಯ ಸಾಹಿತ್ಯಕ್ಕೆ ನಾಂದಿ ಹಾಡಿದರು. ಜೊತೆಗೆ ಕನ್ನಡಿಗರನ್ನು ಒಗ್ಗೂಡಿಸುವ ಕಾರ್ಯದಲ್ಲಿ ತೊಡಗಿದರು. ಈ ನಿಟ್ಟಿನಲ್ಲಿ ಮೂಡಿಬಂದ ಕವನಗಳಲ್ಲಿ ಇದು ಒಂದಾಗಿದೆ.



ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ!
ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮದಾತೆಯೆ!
ನಮ್ಮ ತಪ್ಪನೆನಿತೊ ತಾಳ್ವೆ,
ಅಕ್ಕರೆಯಿಂದೆಮ್ಮನಾಳ್ವೆ,
ನೀನೆ ಕಣಾ ನಮ್ಮ ಬಾಳ್ವೆ,
ನಿನ್ನ ಮರೆಯಲಮ್ಮೆವು!
ತನು ಕನ್ನಡ, ಮನ ಕನ್ನಡ, ನುಡಿ ಕನ್ನಡವೆಮ್ಮವು. ॥೧॥

ಹಣ್ಣನೀವ ಕಾಯನೀವ ಪರಿಪರಿಯ ಮರಂಗಳೊ,
ಪತ್ರಮೀವ ಪುಷ್ಪಮೀವ ಲತೆಯ ತರತರಂಗಳೊ,
ತೆನೆಯ ಕೆನೆಯ ಗಾಳಿಯೊ,
ಖಗಮೃಗೋರಗಾಳಿಯೊ,
ನದಿ ನಗರ ನಗಾಳಿಯೊ!
ಇಲ್ಲಿಲ್ಲದುದುಳಿದುದೆ?
ಜೇನು ಸುರಿವ ಹಾಲು ಹರಿವ ದಿವಂ ಭೂಮಿಗಿಳಿದುದೆ? ॥೨॥





ಜೈನರಾದ ಪೂಜ್ಯಪಾದ ಕೊಂಡಕುಂದವರ್ಯರ,
ಮಧ್ವಯತಿಯೆ ಬಸವಪತಿಯೆ ಮುಖ್ಯ ಮತಾಚಾರ್ಯರ,
ಶರ್ವ ಪಂಪ ರನ್ನರ,
ಲಕ್ಷ್ಮೀಪತಿ ಜನ್ನರ,
ಷಡಕ್ಷರಿ ಮುದ್ದಣ್ಣರ,
ಪುರಂದರ ವರೇಣ್ಯರ,
ತಾಯೆ, ನಿನ್ನ ಬಸಿರೆ ಹೊನ್ನಗನಿ ವಿದ್ಯಾರಣ್ಯರ! ।೩॥

ಹಳೆಯ ಬೀಡ ಬೇಲನಾಡ ಮಾಡಮೆನಿತೊ ಸುಂದರಂ!
ಬಿಳಿಯ ಕೊಳದ ಕಾರಕಳದ ನಿಡುಕರೆನಿತೊ ಬಂಧುರಂ!
ಇಲ್ಲಿಲ್ಲದ ಶಿಲ್ಪಮಿಲ್ಲ;
ನಿನ್ನ ಕಲ್ಲೆ ನುಡಿವುದಲ್ಲ!
ಹಿಂಗತೆಯಿನಿವಾಲ ಸೊಲ್ಲ
ನೆಮ್ಮತೃಷೆಗೆ ದಕ್ಕಿಸು!
ಹೊಸತು ಕಿನ್ನರಿಯಲಿ ನಿನ್ನ ಹಳೆಯ ಹಾಡನುಕ್ಕಿಸು! ॥೪॥

ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ
ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ!
ಕನ್ನಡ ಕಸ್ತೂರಿಯನ್ನ
ಹೊಸತುಸಿರಿಂ ತೀಡದನ್ನ
ಸುರಭಿ ಎಲ್ಲಿ? ನೀನದನ್ನ
ನವಶಕ್ತಿಯಿನೆಬ್ಬಿಸು–
ಹೊಸ ಸುಗಂಧದೊಸಗೆಯಿಂದ ಜಗದಿ ಹೆಸರ ಹಬ್ಬಿಸು। ॥೫॥

ನಮ್ಮೆದೆಯಂ ತಾಯೆ ಬಲಿಸು,
ಎಲ್ಲರ ಬಾಯಲ್ಲಿ ನೆಲಸು,
ನಮ್ಮ ಮನಮನೊಂದೆ ಕಲಸು!
ಇದನೊಂದನೆ ಕೋರುವೆ!
ನಿನ್ನ ಮೂರ್ತಿ ಜಗತ್ಕೀರ್ತಿ ಎಂದಿಗೆಮಗೆ ತೋರುವೆ? ॥೬॥

## ಕೃತಿಕಾರರ ಪರಿಚಯ



**ರಾಷ್ಟ್ರಕವಿ ಎಂ. ಗೋವಿಂದ ಪೈ** ಅವರು ಕಾಸರಗೋಡು ಜಿಲ್ಲೆಯ ಮಂಜೇಶ್ವರದಲ್ಲಿ ೨೩.೦೩.೧೮೮೩ರಲ್ಲಿ ಜನಿಸಿದರು. ತಂದೆ ಸಾಹುಕಾರ ತಿಮ್ಮಪ್ಪೈ, ತಾಯಿ ದೇವಕಿಯಮ್ಮ. ಬಿ.ಎ. ಪದವಿಯನ್ನು ಪಡೆದಿದ್ದ ಗೋವಿಂದ ಪೈ ಅವರು ದೇಶೀ ಭಾಷೆಗಳಲ್ಲಲ್ಲದೆ ವಿದೇಶಿ ಭಾಷೆಗಳ ಪಾಂಡಿತ್ಯವನ್ನುಳ್ಳವರಾಗಿದ್ದರು. ಪ್ರಾಸ ಬಿಟ್ಟು ಪದ್ಯ ರಚಿಸಿದ ಮೊದಲ ಕವಿ ಎಂಬ ಹೆಗ್ಗಳಿಕೆಗೂ ಪಾತ್ರರಾದವರು. ಸಂಶೋಧಕ, ವಿಮರ್ಶಕ, ಅನುವಾದಕರಾಗಿಯೂ ಜನಪ್ರಿಯರಾದ ರಾಷ್ಟ್ರಕವಿ ಗೋವಿಂದ ಪೈ ಅವರ ('ಸುವಾಸಿನಿ') ಮೊದಲ ಕವಿತೆ ೧೯೦೦ ರಲ್ಲಿ **ಸುವಾಸಿನಿ** ಪತ್ರಿಕೆಯಲ್ಲಿ ಪ್ರಕಟವಾಯಿತು. ಅವರ ಕವನ ಸಂಕಲನಗಳು ಇಂತಿವೆ. **ಗಿಳಿವಿಂಡು, ನಂದಾದೀಪ** ಮೊದಲಾದವು. **ನವೀನ ಚಂದ್ರಸೇನರ ಬಂಗಾಳಿ ಕೃಷ್ಣ ಚರಿತೆಯ** ಗದ್ಯಾನುವಾದ, **'ಸಿಂಗಾಲ ಸುತ್ತ'** ಬೌದ್ಧ ಸೂತ್ರಗಳ ಕನ್ನಡ ಅನುವಾದ. ಅಲ್ಲದೇ **೩೫ ವೃತ್ತ**ಗಳುಳ್ಳ ಪ್ರಾಸ ರಹಿತ **ಗೊಮ್ಮಟ ಜಿನಸ್ತುತಿ**ಯನ್ನು ರಚಿಸಿ ಪ್ರಕಟಿಸಿದರು. **ರವೀಂದ್ರನಾಥ ಠಾಕೂರ್, ಅಹಮ್ಮದ್ ಇಕ್ಬಾಲ್, ಉಮರ್ ಖಯ್ಯಾಂನ ರುಬಾಯಿ ಎಂಬ ಜೀವನಚರಿತ್ರೆ**ಗಳನ್ನು ಭಾಷಾಂತರಿಸಿದ್ದಾರೆ. **ವೈಶಾಖ ಮತ್ತು ಗೊಲ್ಗೊಥಾ ಎಂಬ** ಖಂಡಕಾವ್ಯಗಳನ್ನು ಪ್ರಕಟಿಸಿದ್ದಾರೆ.

ಜಪಾನಿನ **ನೋ ನಾಟಕ**ಗಳನ್ನು ಕನ್ನಡಕ್ಕೆ ಅನುವಾದಿಸಿರುವರಲ್ಲದೇ **ಚಿತ್ರಭಾನು, ಹೆಬ್ಬೆರಳು, ಪಾರ್ಶ್ವನಾಥ ತೀರ್ಥಂಕರ ಚರಿತೆ, ಬಾಹುಬಲಿ ಗೊಮ್ಮಟೇಶ್ವರ ಚರಿತೆ, ಭಗವಾನ್ ಬುದ್ಧ** ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ತಮ್ಮ ಜೀವಿತಾವಧಿಯನ್ನು ಸಂಶೋಧನೆ, ಸಾಹಿತ್ಯಕ್ಕಾಗಿ ಮೀಸಲಿಟ್ಟಿದ್ದ ಅವರಿಗೆ ೧೯೪೯ ರಲ್ಲಿ ಮದ್ರಾಸ್ ಸರ್ಕಾರ **ರಾಷ್ಟ್ರಕವಿ** ಬಿರುದು ನೀಡಿ ಗೌರವಿಸಿದೆ. ಇವರು ಕನ್ನಡದ ಮೊದಲ ರಾಷ್ಟ್ರಕವಿ ಹೆಗ್ಗಳಿಕೆಗೆ ಪಾತ್ರರಾದವರು. ಹೊಗಳಿಕೆ ಮತ್ತು ಪ್ರಚಾರಕ್ಕೆ ಹಾತೊರೆಯದ ಇವರು ೧೯೫೦ ರಲ್ಲಿ ಬೊಂಬಾಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆವಹಿಸಿದ್ದರು. ೦೬.೦೯.೧೯೬೩ ರಲ್ಲಿ ಗೋವಿಂದ ಪೈ ಅವರು ದೈವಾಧೀನರಾದರು.

ಪ್ರಸ್ತುತ ಪದ್ಯವನ್ನು **ಎನ್. ಎಸ್. ರಘುನಾಥ್** ಅವರು ಸಂಪಾದಿಸಿರುವ **ಶತಮಾನದ ಮಕ್ಕಳ ಸಾಹಿತ್ಯ** ಸಂಕಲನದಿಂದ ಆರಿಸಿ ಸಂಪಾದಿಸಿ ನಿಗದಿಪಡಿಸಿದೆ.

## ಆಶಯ ಭಾವ



ಇದು ಕರ್ನಾಟಕ ಏಕೀಕರಣದ ಪೂರ್ವದಲ್ಲಿ ಕನ್ನಡತಾಯಿಯನ್ನು ಸ್ತುತಿಸಿ ಬರೆದ ಕವನ. ಕನ್ನಡತಾಯಿ ತನ್ನ ಮುಖವನ್ನು ತೋರುವ ಮೂಲಕ ಕನ್ನಡದ ಮಕ್ಕಳನ್ನು ಒಂದಾಗಿಸಬೇಕು ಎನ್ನುವುದು ಪದ್ಯದ ಮುಖ್ಯ ಆಶಯ. ಕನ್ನಡನಾಡಿನಲ್ಲಿ ಎಲ್ಲಾ ಸಂಪತ್ತು ಇದೆ. ತಾಯಿಯ ಮುಖ ಕಂಡಾಗ ಅದೆಲ್ಲವೂ ಗೋಚರವಾಗುತ್ತದೆ. ಹೀಗೆ ಗೋಚರಿಸಿದಾಗ ಮಾತ್ರ ಕನ್ನಡ ತಾಯಿಯ ಕೀರ್ತಿ ಜಗತ್ತಿನಾದ್ಯಂತ ಪಸರಿಸಲು ಸಾಧ್ಯ. ಅದಕ್ಕಾಗಿ ಕನ್ನಡತಾಯಿ ಎಲ್ಲರ ನಡೆ–ನುಡಿ, ಆಚಾರ–ವಿಚಾರಗಳಲ್ಲಿ ನೆಲೆಯಾಗಬೇಕು. ಕನ್ನಡ ತಾಯಿ ಜನ್ಮದಾತೆಗೆ ಸಮನಾಗಿರುವುದರಿಂದ ಅವಳ ಹರಕೆ–ಹಾರೈಕೆ ನಮಗೆ ಶ್ರೀರಕ್ಷೆ. ಕನ್ನಡಿಗರಿಗೆ ಕನ್ನಡವೇ ಉಸಿರು, ಕನ್ನಡಿಗರ ಧಮನಿಧಮನಿಗಳಲ್ಲಿಯೂ ಕನ್ನಡವೇ ಉಸಿರಾಗಬೇಕು. ಕನ್ನಡ ನಾಡು ನುಡಿಯ ಶ್ರೇಷ್ಠತೆ, ಭವ್ಯಪರಂಪರೆ, ಇತಿಹಾಸ, ಪ್ರಾಕೃತಿಕ, ಸಾಹಿತ್ಯಿಕ, ವಾಸ್ತುಶಿಲ್ಪಗಳ ಭವ್ಯತೆಯಿಂದ ಜಗತ್ತಿನೆಲ್ಲಡೆ ಹರಡಬೇಕೆಂಬುದು ಕವಿಯ ಆಶಯವಾಗಿದೆ.

## ಪದಗಳ ಅರ್ಥ

ಆಳ್ವೆ – ಆಳುವೆ ; ಒಸಗೆ– ಸಂತೋಷ, ಶುಭವಾರ್ತೆ ; ಕಾರಕಳ – ಕಾರ್ಕಳ (ಉಡುಪಿ ಜಿಲ್ಲೆಯ ಒಂದು ತಾಲೂಕು ಕೇಂದ್ರ); ಕೆನೆ – ಸಾರ, ತಿರುಳು ; ತಾಳ್ವೆ – ಸಹಿಸುವೆ ; ತೃಷೆ – ಬಾಯಾರಿಕೆ ; ದಿವಂ – ಆಕಾಶ ; ನಗಾಳಿ – ಪರ್ವತಗಳ ಸಮೂಹ ; ನಿಡುಕರು –ನಿಡಿದಾಗಿ ನಿಂತಿರುವ (ನಿಡು ನಿಂದಿರುವ) ಗೊಮ್ಮಟ ಮೂರ್ತಿ ; ಬಸಿರು – ಗರ್ಭ, ಗರ್ಭಾಶಯ; ಬಿಳಿಯ ಕೊಳ – ಬೆಳಗೊಳ, ಶ್ರವಣಬೆಳಗೊಳ; ಬೇಲನಾಡು – ಬೇಲೂರು; ಮೊಗ – ಮುಖ; ಲತೆ – ಬಳ್ಳಿ ; ಶರ್ವ – ನೃಪತುಂಗನ ಮತ್ತೊಂದು ಹೆಸರು ; ಸುರಭಿ – ಸುಗಂಧ, ಸುವಾಸನೆ; ನಂದಿನಿ–ಗೋವು.

**ಟಿಪ್ಪಣಿ**

**ನಗಾಳಿ** : ನಗ – ಪರ್ವತ ; ಆಳಿ – ಸಮೂಹ – ಪರ್ವತಗಳ ಸಮೂಹ

**ಖಗ** : ಖ – ಆಕಾಶ : ಗ – ಗಮಿಸುವುದು (ಸಂಚರಿಸುವುದು) ಆಕಾಶದಲ್ಲಿ ಸಂಚರಿಸುವುದು – ಪಕ್ಷಿ

**ಖಗಮೃಗೋರಗಾಳಿ** : ಖಗ – ಪಕ್ಷಿ ; ಮೃಗ – ಪ್ರಾಣಿ ; ಉರಗ – ಹಾವು ; ಆಳಿ – ಸಮೂಹ; ಪ್ರಾಣಿ, ಪಕ್ಷಿ, ಹಾವುಗಳ ಸಮೂಹ.

**ಕೊಂಡಕುಂದವರ್ಯ** : ಜೈನಧರ್ಮದಲ್ಲಿ **ದಿಗಂಬರ – ಶ್ವೇತಾಂಬರ** ಎಂಬ ಸಂಪ್ರದಾಯ ಭೇದಗಳು ಹುಟ್ಟುವ ಮೊದಲು ಜೈನಧರ್ಮವು **ಅರ್ಹಂತ, ಅನೇಕಾಂತ** ಎಂಬಿವೇ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿತ್ತು. ವಿಕ್ರಮ ಶಕದ ೧೩೬ನೆಯ ವರ್ಷದಲ್ಲಿ ಅಂದರೆ ಕ್ರಿ.ಶ. ೮೦–೮೧ ರಲ್ಲಿ ಅದು **ದಿಗಂಬರ– ಶ್ವೇತಾಂಬರ** ಸಂಪ್ರದಾಯಗಳೆಂದು ಕವಲಾಗುತ್ತಲೇ **ದಿಗಂಬರ** ಸಂಪ್ರದಾಯಕ್ಕೆ **ಮೂಲ ಸಂಘ**ವೆಂದು ಹೆಸರಾಯಿತು. **ಪದ್ಮನಂದಿ** ಎಂಬ ಮೊದಲನೆಯ ಹೆಸರುಳ್ಳ **ಕೊಂಡಕುಂದಾಚಾರ್ಯ**ನು ಈ **ಮೂಲಸಂಘ**ದ ಮುಂದಾಳೆಂದೂ ಒಂದು **ಗಣ**ದ ಒಡೆಯನೆಂದೂ ಕಂಡುಬರುತ್ತದೆ.

**ಹಿಂಗತೆಯಿನಿವಾಲ ಸೊಲ್ಲ** : ಹಿಂಗತೆ – ಹಿನ್ನೆಲೆಯ ಕತೆ (ಬೇಲೂರು, ಹಳೆಬೀಡು ಇತ್ಯಾದಿ ಶಿಲ್ಪಕಲೆಗಳ ಹಿಂದೆ ಇರುವ ಕತೆ) ಇನಿದು – ಇನಿದಾದ, ಸವಿಯಾದ, ರುಚಿಯಾದ, ಪಾಲು–ಹಾಲು; ಸೊಲ್ಲು – ಮಾತು; ಹಿನ್ನೆಲೆಯ ಕಥೆ ಸವಿಯಾದ ಹಾಲಿನಂತಿರುವ ಮಾತುಗಳಿಂದ ಕೂಡಿದೆ.

**ಎಮ್ಮ ತೃಷೆಗೆ ದಕ್ಕಿಸು** : ಎಮ್ಮ – ನಮ್ಮ : ತೃಷೆ – ದಾಹ, ಬಾಯಾರಿಕೆ ; ದಕ್ಕಿಸು – ನೀಡು; ಕರ್ನಾಟಕದ ಶಿಲ್ಪಕಲೆಯ ಇತಿಹಾಸವನ್ನು ತಿಳಿದುಕೊಳ್ಳಬೇಕೆಂಬ ದಾಹವುಳ್ಳ (ಬಯಕೆವುಳ್ಳ) ನಮಗೆ ನೀಡು.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ನಮ್ಮನ್ನು ಆಳುವವಳು ಯಾರು?

೨. ಲತೆ ಯಾವುದನೆಲ್ಲಾ ನೀಡುತ್ತದೆ?

೩. ಕನ್ನಡ ತಾಯಿಯ ಬಸಿರ ಹೊನ್ನಗನಿ ಯಾರು?

೪. ಕನ್ನಡ ತಾಯಿಯ ಹಾಡನ್ನು ಯಾವುದರಿಂದ ಉಕ್ಕಿಸಬೇಕು?

೫. ಕನ್ನಡಿಗರ ಪಾಡು ಏನು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ಕನ್ನಡ ನಾಡಿನ ಪ್ರಕೃತಿ ವೈಶಿಷ್ಟ್ಯವೇನು?

೨. ಕನ್ನಡದ ಕವಿಶ್ರೇಷ್ಠರ ಹಿರಿಮೆಯೇನು?

೩. ಕನ್ನಡದ ಹೆಸರನ್ನು ಹೇಗೆ ಹಬ್ಬಿಸಬೇಕೆಂದು ಕವಿ ಆಶಿಸುತ್ತಾರೆ?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ನಾಲ್ಕು–ಐದು ವಾಕ್ಯಗಳಲ್ಲಿ ಉತ್ತರಿಸಿ.**

೧. ಕನ್ನಡ ತಾಯಿಯನ್ನು ಮರೆಯಲು ಸಾಧ್ಯವಿಲ್ಲ ಏಕೆ?

೨. ಕವಿ ಕನ್ನಡ ತಾಯಿಯಲ್ಲಿ ಏನೆಂದು ಕೋರುತ್ತಾರೆ?

೩. ಗೋವಿಂದ ಪೈ ಅವರ ಪ್ರಮುಖ ಕೃತಿಗಳಾವುವು?

**ಈ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು–ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಕನ್ನಡಿಗರ ತಾಯಿ ಮೊಗ ತೋರಬೇಕೆಂದು ಕವಿ ಏಕೆ ಬಯಸುತ್ತಾರೆ?ವಿವರಿಸಿ.

೨. ಕನ್ನಡ ನಾಡಿನ ಕವಿ ಹಾಗೂ ಕಲೆಯ ಮಹತ್ವವೇನು? – ವಿವರಿಸಿ.

**ಉ. ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ಖಗ ಮೃಗೋರಗಾಳಿಯೋ"

೨. "ನಿನ್ನ ಕಲ್ಲೆ ನುಡಿವುದಲ್ಲ!"

೩. "ನಮ್ಮ ಮನಮನೊಂದೆ ಕಲಸು!"

**ಊ. ಹೊಂದಿಸಿ ಬರೆಯಿರಿ.**

| ಅ | ಬ |
|---|---|
| ೧. ಬೇಲನಾಡು | ಬಾಹುಬಲಿ |
| ೨. ಶರ್ವ | ಖಂಡಕಾವ್ಯ |
| ೩. ಗೊಲ್ಗೊಥಾ | ಕವನಸಂಕಲನ |
| ೪. ಗಿಳಿವಿಂಡು | ಹಳೆಬೀಡು |
| | ಬೇಲೂರು |
| | ನೃಪತುಂಗ |

**ಋ. ಬಿಟ್ಟ ಸ್ಥಳ ತುಂಬಿ.**

೧. ಹರಸು ತಾಯೆ ______ ಕಾಯೆ

೨. ಹಾಲು ಹರಿವ _______ ಭೂಮಿಗಿಳಿದುದೆ?

೩. ಜೈನರಾದ ಪೂಜ್ಯಪಾದ ________

೪. _________ ಸೇಡು ನಮ್ಮ ಪಾಡು

## ಪಠ್ಯಾಧಾರ ಚಟುವಟಿಕೆ

**ಅ. ಕೊಟ್ಟಿರುವ ಪದ್ಯಭಾಗವನ್ನು ಕಂಠಪಾಠ ಮಾಡಿ.**

೧. ಜೈನರಾದ ___ ___ ____ ___ ___ ___ _____ವಿದ್ಯಾರಣ್ಯರ! (ಏಳು ಸಾಲು)

**ಆ. ಕವಿತೆಯಲ್ಲಿ ಬರುವ ಮಹಾತ್ಮರ ಭಾವಚಿತ್ರಗಳನ್ನು ಸಂಗ್ರಹಿಸಿ.**

## ಪೂರಕ ಓದು

✦ ರಾಷ್ಟ್ರಕವಿ **ಎಂ.ಗೋವಿಂದ ಪೈ** ಅವರ **ಗಿಳಿವಿಂಡು** ಕವನ ಸಂಕಲನದ ಕವಿತೆಗಳನ್ನು ಕಲಿಯಿರಿ.



# ೨. ಸಣ್ಣ ಸಂಗತಿ




ಕೆ.ಎಸ್. ನರಸಿಂಹಸ್ವಾಮಿ–

**ಪ್ರವೇಶ :** ಕನ್ನಡ ಸಾಹಿತ್ಯವು ಆಧುನಿಕ ಕಾವ್ಯ ಪರಂಪರೆಯಲ್ಲಿ ಹೊಸ ಹೊಸ ಪ್ರಯೋಗಶೀಲತೆಗೆ ಒಳಪಟ್ಟು ನವೋದಯ, ನವ್ಯ, ಪ್ರಗತಿಶೀಲ, ದಲಿತ, ಬಂಡಾಯಗಳೆಂಬ ವಿವಿಧ ಮಜಲುಗಳಾದವು. ಪ್ರತಿಯೊಬ್ಬ ಕವಿಯೂ ಸಹ ಜೀವನ ದೃಷ್ಟಿ, ಸಾಮಾಜಿಕ ಸೂಕ್ಷ್ಮತೆಗಳನ್ನರಿತಾಗ ತಮ್ಮ ತಮ್ಮ ಅನುಭವ ಕಲ್ಪನೆಗಳಿಗೆ ಧ್ವನಿಕೊಡುವ ಕಾಯಕದಲ್ಲಿ ತೊಡಗುತ್ತಾರೆ. ಇದರಿಂದಾಗಿ ಆಧುನಿಕ ಕಾವ್ಯಗಳಲ್ಲಿ ಹೊಸತನ ಕಾಣಿಸಿಕೊಂಡಿದೆ. ಈ ಪ್ರಕಾರಗಳಲ್ಲಿ ಪ್ರಸ್ತುತ ಕವನವೊಂದಾಗಿದೆ.

ನಟ್ಟಿರುಳ ಕರಿಮುಗಿಲ ನೀರ್–ತುಂಬಿಗಳ ನಡುವೆ
ಹುಣ್ಣಿಮೆಯ ಕಣ್ಣ ತೆರೆದಿದೆ. ತಾರೆ ಬಂದಿವೆ
ಬಾನ ಬೀದಿಗೆ. ಅತ್ತ ಹಿಡಿದ ಸೋನೆಯ ಶ್ರುತಿಗೆ
ಗಾಳಿಯೇ ಹಾಡುತಿದೆ. ಇತ್ತ ಈ ಮನೆಯೊಳಗೆ





ಪುಟ್ಟ ಮಗುವೊಂದು ಮಂಚದ ಬಳಿಯ ತೊಟ್ಟಿಲಲಿ
ಕಣ್ಣರ್ಧ ಮುಚ್ಚಿ ಮಲಗಿದೆ, ಅದೂ ಬರಿಮೈಲಿ !
ನಿದ್ದೆಗಣ್ಣಿನಲೆ ಪಕ್ಕದ ತಾಯಿ ಕೈ ನೀಡಿ
ಮತ್ತೆ ಹೊದಿಕೆಯನು ಸರಿಪಡಿಸುವಳು. ಮಗು ತಿರುಗಿ

ಹೊದಿಕೆಯನೆ ಕಿತ್ತೆಸೆದು ಮಲಗುವುದು ಬರಿ ಮೈಲಿ;
ಸಣ್ಣಗಿದೆ ದೀಪ ಎಲ್ಲೋ ಒಂದು ಮೂಲೆಯಲಿ.
ಇದು ಸರಿಯೆ ? ತಪ್ಪೆ ? ಉತ್ತರವಿಲ್ಲ. ದೆಸೆ ದೆಸೆಗೆ
ಎಲ್ಲ ಮಲಗಿಹರು ಮಾತಾಡದೆಯೆ, ನೋಡದೆಯೆ.
ನಿದ್ದೆ ಎಚ್ಚರಗಳಲಿ ಪೊರೆವ ಕೈ ದುಡಿಯುತಿದೆ;
ಅದನು ಲೆಕ್ಕಿಸದೆ ಮಗು ಹೊದಿಕೆಯನು ಒದೆಯುತಿದೆ.

******

## ಕೃತಿಕಾರರ ಪರಿಚಯ



ಆಧುನಿಕ ಕಾವ್ಯ ಸಂದರ್ಭದ ಪ್ರಮುಖ ಕವಿಗಳಲ್ಲಿ ಒಬ್ಬರಾದ **ಕೆ.ಎಸ್. ನರಸಿಂಹಸ್ವಾಮಿ** ಅವರು ೨೬-೦೧-೧೯೧೫ ರಲ್ಲಿ ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲೂಕಿನ **ಕಿಕ್ಕೇರಿ**ಯಲ್ಲಿ ಜನಿಸಿದರು. ಇವರ ಮೊದಲ ಕವನ ಸಂಕಲನ **ಮೈಸೂರು ಮಲ್ಲಿಗೆ** ೧೯೪೨ರಲ್ಲಿ ಪ್ರಕಟವಾಯಿತು. ಇವರು **ಶಿಲಾಲತೆ, ಐರಾವತ, ನವಪಲ್ಲವ, ಇರುವಂತಿಗೆ, ದೀಪದ ಮಲ್ಲಿ, ಮನೆಯಿಂದ ಮನೆಗೆ, ತೆರೆದ ಬಾಗಿಲು** ಮೊದಲಾದ ಕವನ ಸಂಕಲನಗಳನ್ನು ರಚಿಸಿದ್ದಾರೆ. ೧೯೭೭ ರಲ್ಲಿ ಇವರ **ತೆರೆದ ಬಾಗಿಲು** ಎಂಬ **ಕವನ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.** ೧೯೯೦ರಲ್ಲಿ ಮೈಸೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರ **ದುಂಡು ಮಲ್ಲಿಗೆ** ಕವನ ಸಂಕಲನಕ್ಕೆ ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಪಂಪ ಪ್ರಶಸ್ತಿ ಲಭಿಸಿದೆ. ಇವರನ್ನು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ **ಪ್ರೇಮಕವಿ** ಎಂದೇ ಗುರುತಿಸಿದೆ. ೨೦೦೩ರಲ್ಲಿ ದೈವಾಧೀನರಾದರು.

## ಆಶಯ ಭಾವ

ಸಣ್ಣ ಸಂಗತಿ ಕವನದಲ್ಲಿ ಕವಿ ತಾಯ ಪಕ್ಕದಲ್ಲಿ ಮಲಗಿರುವ ಮಗು ನಟ್ಟಿರುಳು ತನ್ನ ಹೊದಿಕೆಯನ್ನು ಕಿತ್ತೆಸೆದಾಗ, ಮತ್ತೆ ಮತ್ತೆ ತಾಯಿಯ ಕೈ ಮಗುವಿನ ಹೊದಿಕೆಯನ್ನು ಸರಿಪಡಿಸುವ ಸಣ್ಣ ಸಂಗತಿಯೊಂದನ್ನು ಪ್ರಕೃತಿಯ ನೀರು ತುಂಬಿರುವ ಕರಿಮುಗಿಲು, ಆಕಾಶಕ್ಕೆ ಹುಣ್ಣಿಮೆಯ ಕಣ್ಣುತೆರದ, ಬಾನ ಬೀದಿಗೆ ತಾರೆ ಬಂದಿವೆ, ಸೋನೆಯ ಶ್ರುತಿಗೆ ಗಾಳಿಯೇ ಹಾಡುವ-ಮೊದಲಾದ ಪ್ರಾಕೃತಿಕ ಚೌಕಟ್ಟಿನೊಳಗಿನ ದೊಡ್ಡ ಘಟನೆಗಳೊಂದಿಗೆ ಹೋಲಿಸಿ ವರ್ಣಿಸಲಾಗಿದೆ. ಈ ಸಣ್ಣಸಂಗತಿ ವಾಸ್ತವವಾಗಿ ಸದಾಕಾಲ ಕಾಪಾಡುವ ಕರುಣೆಯೊಂದರ ಸಂಕೇತವಾಗಿದೆ. ಹಗಲಿರುಳೆನ್ನದೆ ಸದಾ ತನ್ನ ಮಗುವಿನ ಆರೈಕೆಯಲ್ಲಿ ತನ್ನ ತಾಯ್ತನದ ಸಾರ್ಥಕ್ಯ ಪಡೆಯುವ ತಾಯಿಯ ಹೃದಯದ ತುಡಿತ-ಮಿಡಿತಗಳ ಗಹನವಾದ ತತ್ವದ ಸಂಕೇತವಾಗಿದೆ. ಹೆಣ್ಣಿನ ಜನ್ಮ ಸಾರ್ಥಕ್ಯವನ್ನು ಪಡೆಯುವುದು ಹಾಗೂ ಜೀವನ

ಪರಿಪೂರ್ಣಗೊಳ್ಳುವುದು ಆಕೆಯ ತಾಯ್ತನದಲ್ಲಿ. ಆ ಮಗುವಿನ ಆರೈಕೆ – ಪೋಷಣೆ, ಲಾಲನೆ – ಪಾಲನೆಗಳಲ್ಲಿಯೇ ತನ್ನೆಲ್ಲ ಸುಖ ಸಂತೋಷಗಳನ್ನು ಕಾಣುತ್ತಾಳೆ. ಹಾಗೂ ತನ್ನ ನೋವು, ಸಂಕಟಗಳನ್ನು ಮರೆಯುತ್ತಾಳೆ. ಹಗಲಿರುಳೆನ್ನದೆ ತನ್ನ ಮಗುವಿನ ಸಂರಕ್ಷಣೆಯನ್ನು ಮಾಡುವ ತಾಯಿ ಹೃದಯದ ಮಿಡಿತವನ್ನು ಪ್ರಕೃತಿಯ ಸನ್ನಿವೇಶಗಳಿಗೆ ಹೋಲಿಸಿರುವುದು ಸಹೃದಯರ ಮನದಲ್ಲಿ ಸದಾ ನಿಲ್ಲುತ್ತದೆ.

ಪ್ರಕೃತ **'ಸಣ್ಣ ಸಂಗತಿ'** ಈ ಕವನವನ್ನು **ಕೆ.ಎಸ್. ನರಸಿಂಹಸ್ವಾಮಿ** ಅವರ **'ಇರುವಂತಿಗೆ'** ಕವನಸಂಗ್ರಹದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ.

* * *

## ಪದಗಳ ಅರ್ಥ

ಕರಿಮುಗಿಲು–ಕಪ್ಪಾದ ಮೋಡ; ತಾರೆ–ನಕ್ಷತ್ರ; ದೆಸೆ – ದಿಕ್ಕು; ನಟ್ಟಿರುಳು–ನಡು ಇರುಳು, ಮಧ್ಯರಾತ್ರಿ; ಪೊರೆ–ಆರೈಕೆ, ರಕ್ಷಣೆ; ಬಾನು–ಆಕಾಶ; ಲೆಕ್ಕಿಸದೆ–ಗಮನಿಸದೆ, ಲೆಕ್ಕಕ್ಕೆ ಪರಿಗಣಿಸದೆ; ಸೋನೆ–ತುಂತುರು ಮಳೆ, ಜಿಡಿಮಳೆ;

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಹುಣ್ಣಿಮೆಯ ಕಣ್ಣು ಎಲ್ಲಿ ತೆರೆದಿದೆ?

೨. ಪುಟ್ಟ ಮಗುವು ತೊಟ್ಟಿಲಲ್ಲಿ ಹೇಗೆ ಮಲಗಿದೆ?

೩. ಮೂಲೆಯಲ್ಲಿ ಇರುವುದೇನು?

೪. ನಿದ್ದೆ ಎಚ್ಚರಗಳಲ್ಲಿ ಯಾವ ಕೈ ದುಡಿಯುತಿದೆ?

೫. ಯಾವುದನ್ನು ಲೆಕ್ಕಿಸದೆ ಮಗು ಹೊದಿಕೆಯನ್ನು ಒದೆಯುತಿದೆ?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ತಾಯಿ ತನ್ನ ಮಗುವಿನ ಆರೈಕೆಯನ್ನು ಹೇಗೆ ಮಾಡುತ್ತಾಳೆ ವಿವರಿಸಿ.

೨. ಕವಿ ಯಾವ ಸಣ್ಣ ಸಂಗತಿಯನ್ನು ಈ ಕವನದಲ್ಲಿ ವಿವರಿಸಿದ್ದಾರೆ?

೩. ಈ ಕವನದಲ್ಲಿ ಕವಿ ನೀಡಿರುವ ಪ್ರಾಕೃತಿಕ ಘಟನೆಗಳನ್ನು ತಿಳಿಸಿ.

**ಇ. ಈ ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ತಾರೆ ಬಂದಿವೆ ಬಾನ ಬೀದಿಗೆ."

೨. "ತಾಯಿ ಕೈನೀಡಿ ಮತ್ತೆ ಹೊದಿಕೆಯನು ಸರಿಪಡಿಸುವಳು."

೩. "ನಿದ್ದೆ ಎಚ್ಚರಗಳಲಿ ಪೊರೆವ ಕೈ ದುಡಿಯುತಿದೆ."

**ಈ. ಕೊಟ್ಟಿರುವ ಪ್ರಶ್ನೆಗೆ ಏಳೆಂಟು ವಾಕ್ಯಗಳಲ್ಲಿ ಉತ್ತರಿಸಿ.**

೧. ಕವಿ ಯಾವ ಸಣ್ಣ ಸಂಗತಿಯೊಂದನ್ನು ಪ್ರಕೃತಿಯ ಘಟನೆಗಳೊಂದಿಗೆ ಹೋಲಿಕೆ ಮಾಡಿದ್ದಾರೆಂಬುದನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

## ಸೈದ್ಧಾಂತಿಕ ಭಾಷಾಭ್ಯಾಸ

**ಛಂದಸ್ಸು : ಪರಿಚಯಾತ್ಮಕ ವಿವರ.**

ಕಾವ್ಯವನ್ನು **ಗದ್ಯ, ಪದ್ಯ** ಮತ್ತು **ಚಂಪೂ** ಎಂದು ಮೂರು ವಿಭಾಗ ಮಾಡಲಾಗಿದೆ. **ಚಂಪೂ ಕಾವ್ಯ** ಗದ್ಯಪದ್ಯ ಮಿಶ್ರಿತ ಶೈಲಿಯಾಗಿರುವುದರಿಂದ ಪ್ರಧಾನವಾಗಿ **ಗದ್ಯ** ಮತ್ತು **ಪದ್ಯ** ಎಂಬೆರಡೇ ವಿಭಾಗಗಳೆಂದೂ ಹೇಳಬಹುದು.

ಪದ್ಯಗಳನ್ನು ರಚಿಸುವಾಗ ನಿರ್ದಿಷ್ಟ ನಿಯಮಗಳನ್ನು ಅನುಸರಿಸಲಾಗುವುದು. ಅದೇ **ಛಂದಸ್ಸು.** ವ್ಯಾಕರಣಶಾಸ್ತ್ರವು **ಗದ್ಯ** ಮತ್ತು **ಪದ್ಯ** ಎರಡಕ್ಕೂ ಸಂಬಂಧಿಸಿದ್ದು. ಛಂದಶ್ಶಾಸ್ತ್ರವು **ಪದ್ಯಕ್ಕೆ** ಮಾತ್ರ ಸೀಮಿತವಾದುದು.

ಆಧುನಿಕ ಕನ್ನಡ ಕಾವ್ಯಗಳಲ್ಲಿ **ಛಂದಸ್ಸು** ಹೆಚ್ಚು ಬಳಕೆಯಾಗುತ್ತಿಲ್ಲ. ಆದರೆ ಕಾವ್ಯ ಪರಂಪರೆಯಲ್ಲಿ ಛಂದಸ್ಸಿಗೆ ವಿಶೇಷ ಮಹತ್ವವಿದೆ. ಇಲ್ಲಿ ಕೊಟ್ಟಿರುವ ಮೂರು ಕಾರಣಗಳಿಂದಾಗಿ ಛಂದಸ್ಸಿಗೆ ಗುರುತರವಾದ ಮಹತ್ವವುಂಟು.

- **ಹಿಂದಿನ ಕಾವ್ಯಗಳ ಲಕ್ಷಣ ತಿಳಿಯಲು**
- **ಛಂದಸ್ಸನ್ನು ಕಡೆಗಣಿಸಿದ್ದರ ಔಚಿತ್ಯದ ಬಗ್ಗೆ ಮರು ಚಿಂತಿಸಲು**
- **ಛಂದಸ್ಸಿನ ಹೊಸ ಬಗೆಯ ಪ್ರಯೋಗಗಳನ್ನು ಅರಿಯಲು**

ಒಂದು ಗೊತ್ತಾದ ಸಾಲುಗಳ (ಪಾದಗಳ) ನಿಯಮ ಅನುಸರಿಸಿ ಬರೆದವುಗಳೇ ಪದ್ಯಗಳು. **ಮೂರು ಪಾದಗಳ** ಪದ್ಯವನ್ನು **ತ್ರಿಪದಿ** ಎಂತಲೂ **ನಾಲ್ಕು ಪಾದಗಳ** ಪದ್ಯವನ್ನು **ಚೌಪದಿ** ಎಂತಲೂ **ಆರುಪಾದಗಳ** ಪದ್ಯವನ್ನು **ಷಟ್ಪದಿ** ಎಂತಲೂ ಇತ್ತೀಚಿನ **ಹದಿನಾಲ್ಕು ಪಾದಗಳ** ಪದ್ಯವನ್ನು **ಅಷ್ಟಷಟ್ಪದಿ (ಸುನೀತ/ಸಾನೆಟ್)** ಎಂತಲೂ ಕರೆಯುವರು. ಹಾಗಾಗಿ ಪದ್ಯ ಎಂಬುದು ನಿರ್ದಿಷ್ಟ

ಸಂಖ್ಯೆಯ ಪಾದಗಳಿಂದ ಕೂಡಿರಬೇಕು. ಪದ್ಯದ ಪ್ರತಿಯೊಂದು ಪಾದ **ಪ್ರಾಸ, ಯತಿ** ಮತ್ತು **ಗಣ**ಗಳ ನಿಯಮದಿಂದ ಕೂಡಿರುತ್ತದೆ. ಆದುದರಿಂದ **ಪದ್ಯವನ್ನು ರಚಿಸಲು ಬೇಕಾದ ನಿರ್ದಿಷ್ಟ ಪಾದಗಳ ಬಗ್ಗೆ ಮತ್ತು ಪ್ರತಿ ಪಾದದಲ್ಲಿ ಇರಬೇಕಾದ ಪ್ರಾಸ, ಯತಿ, ಗಣಗಳ ಬಗ್ಗೆ ತಿಳಿಸುವ ಶಾಸ್ತ್ರವೇ ಛಂದಸ್ಸು.**

**ಪ್ರಾಸ :** ಗು**ರು** ಹಿರಿಯರ ಅರಿಯದವನ ಅರಿವದೇತ**ಕೆ**

ಪ**ರ** ಹಿತಾರ್ಥಕಿಲ್ಲದವನ ಶರೀರವೇತ**ಕೆ**

ಹ**ರಿ**ಯ ಪೂಜೆ ಮಾಡದವನ ಜನುಮವೇತ**ಕೆ**

ಸೇ**ರಿ**ದವರ ಹೊರೆಯದಂಥ ದೊರೆಯು ಏತ**ಕೆ**

ಈ ಪದ್ಯವನ್ನು ಗಮನಿಸಿದಾಗ ಪ್ರತಿ ಸಾಲಿನ ಎರಡನೆಯ ಅಕ್ಷರದಲ್ಲಿರುವ ವ್ಯಂಜನಾಕ್ಷರ ಒಂದೇ ಆಗಿದೆ. ಅದೇ ರೀತಿ ಪ್ರತಿ ಸಾಲಿನ ಕೊನೆಯ ವ್ಯಂಜನವೂ ಒಂದೇ ಆಗಿದೆ. ಹೀಗೆ – **ಪದ್ಯದ ಪ್ರತಿಯೊಂದು ಪಾದದ ಎರಡನೆಯ ಅಕ್ಷರದಲ್ಲಿ ಅಥವಾ ಪ್ರತಿಸಾಲಿನ ಕೊನೆಯ ಅಕ್ಷರದಲ್ಲಿ ಒಂದೇ ಜಾತಿಯ ವ್ಯಂಜನವಿದ್ದರೆ ಅದೇ ಪ್ರಾಸ.**

ಪ್ರತಿಸಾಲಿನ **ಎರಡನೆಯ ಅಕ್ಷರ** ಪ್ರಾಸವಾಗಿದ್ದರೆ **ಆದಿಪ್ರಾಸ** ಎಂತಲೂ **ಅಂತ್ಯದಲ್ಲಿ** ಬರುವ ಪ್ರಾಸವನ್ನು **ಅಂತ್ಯಪ್ರಾಸ** ಎಂತಲೂ (ಹೆಚ್ಚಾಗಿ ರಗಳೆ ಛಂದಸ್ಸಿನಲ್ಲಿ ಕಾಣಬಹುದು) **ಮಧ್ಯದಲ್ಲಿ** ಬರುವ ಪ್ರಾಸವನ್ನು **ಒಳಪ್ರಾಸ** ಅಥವಾ **ಮಧ್ಯಪ್ರಾಸ** ಎಂತಲೂ ಕರೆಯುವರು.

**ಯತಿ : ಪದ್ಯವನ್ನು ವಾಚಿಸುವಾಗ ಅರ್ಥಕ್ಕೆ ಲೋಪವಾಗದಂತೆ ನಿಲ್ಲಿಸುವ ಸ್ಥಳವನ್ನು ಯತಿ ಎನ್ನುವರು. ಯತಿ** ಎಂಬುದು ಸಂಸ್ಕೃತ ಕಾವ್ಯಗಳಲ್ಲಿ ಬಳಕೆಯಾದಷ್ಟು ಕನ್ನಡದಲ್ಲಿ ಬಳಕೆಯಾಗಿಲ್ಲ.

**ಗಣ :** **ಗಣ** ಎಂದರೆ **ಗುಂಪು** ಎಂದರ್ಥ. **ಪದ್ಯದ ಪ್ರತಿಸಾಲಿನ ಅಕ್ಷರ ಅಥವಾ ಮಾತ್ರೆ ಅಥವಾ ಅಂಶಗಳ ಗುಂಪೇ ಗಣ. ಮಾತ್ರೆಗಳ ಲೆಕ್ಕಾಚಾರ**ದಿಂದ ಗುಂಪು ಮಾಡಿದರೆ **ಮಾತ್ರಾಗಣ** ಎಂತಲೂ **ಅಕ್ಷರಗಳ ಲೆಕ್ಕಾಚಾರ**ದಿಂದ ಗುಂಪು ಮಾಡಿದರೆ **ಅಕ್ಷರಗಣ** ಎಂತಲೂ **ಅಂಶಗಳ ಆಧಾರದಿಂದ** ಗುಂಪು ಮಾಡಿದರೆ **ಅಂಶಗಣ** ಎಂತಲೂ ಕರೆಯುವರು.

## ಅಭ್ಯಾಸ ಚಟುವಟಿಕೆ

**ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಛಂದಸ್ಸು ಎಂದರೇನು?

೨. ಪ್ರಾಸ ಎಂದರೇನು? ಅದರ ವಿಧಗಳಾವುವು?

೩. ಗಣ ಎಂದರೇನು? ವಿವರಿಸಿ.

## ಪಠ್ಯಾಧಾರಿತ ಚಟುವಟಿಕೆ

**ಅ. ಕೊಟ್ಟಿರುವ ಪದ್ಯಭಾಗವನ್ನು ಕಂಠಪಾಠ ಮಾಡಿ.**

೧. ಪುಟ್ಟ ಮಗುವೊಂದು ___ ___ ___ ___ ಮಗು ತಿರುಗಿ. (ನಾಲ್ಕು ಸಾಲು)

## ಪೂರಕ ಓದು

✦ ಕೆ. ಎಸ್. ನ. ಮತ್ತು ಇತರ ಕವಿಗಳ ವಾತ್ಸಲ್ಯಗೀತೆಗಳನ್ನು ಸಂಗ್ರಹಿಸಿ ಓದಿರಿ.



# ೩. ಗೆಳೆತನ




**ಚೆನ್ನವೀರ ಕಣವಿ–**

**ಪ್ರವೇಶ :** ಆಧುನಿಕ ಕಾವ್ಯದಲ್ಲಿ ಕವಿಯ ದೃಷ್ಟಿಕೋನ ಬಹಳ ವಿಸ್ತಾರವನ್ನು ಪಡೆದುಕೊಂಡಿದೆ. ಕವಿ ಸಾಹಿತ್ಯಕ ಕಟ್ಟುಪಾಡುಗಳಿಂದ ಹೊರಬಂದು ಸ್ವಚ್ಛಂದ ಹರಿವಿನ ಪ್ರವಾಹದಲ್ಲಿ ಕಂಡಿದ್ದೆಲ್ಲವನ್ನು 'ನವನವೋನ್ಮೇಷ ಶಾಲಿನಿ'ಯನ್ನಾಗಿಸಿ ಹೊಸ ಹುಟ್ಟಿಗೆ ಕಾರಣನಾಗಿದ್ದಾನೆ. ಈ ಕಾವ್ಯ ಪರಂಪರೆಯಲ್ಲಿ ಬಂದ ಕವಿಗಳಲ್ಲಿ ಚನ್ನವೀರ ಕಣವಿಯವರು ಒಬ್ಬರು.

ಇಂದು ಇಡೀ ಜಗತ್ತು ಭಯ, ಆತಂಕ, ಭಯೋತ್ಪಾದನೆಯ ಕರಿನೆರಳಿಗೆ ಸಿಲುಕಿ ನರಳುತ್ತಿದೆ. ವಿಶ್ವವನ್ನೆಲ್ಲ ಒಗ್ಗೂಡಿಸಲು ಇರುವ ಏಕಮಾತ್ರ ಸಾಧನ ಸ್ನೇಹ ಸಂಬಂಧಗಳು ಮಾತ್ರ. ಗೆಳೆತನವು ಪ್ರತಿಯೊಬ್ಬ ಮಾನವನ ಹೃದಯದ ಮಿಡಿತವಾಗಿದೆ. ಜನ್ಮನೀಡಿದ ತಂದೆ–ತಾಯಿಯರನ್ನು ಮೀರಿಸಿದ ಬಾಂಧವ್ಯ ಗೆಳತನದ್ದು. ಇದಕ್ಕೆ ಪುರಾಣ ಇತಿಹಾಸಗಳ ಹಿನ್ನಲೆಯಿದೆ. ಕೃಷ್ಣ–ಸುಧಾಮ, ಕರ್ಣ–ದುರ್ಯೋಧನ, ಚಂದನದಾಸ – ಅಮಾತ್ಯ ರಾಕ್ಷಸರವರ ನಿದರ್ಶನಗಳು ಪುರಾಣ ಇತಿಹಾಸದ್ದು ಹಾಗೂ ವೈಯಕ್ತಿಕ ಬದುಕಿನ ಪ್ರತಿಬಿಂಬಗಳಾಗಿವೆ. ಗೆಳತನಕ್ಕೆ ಮೇಲು–ಕೀಳುಗಳಾಗಲಿ, ಹೆಣ್ಣು ಗಂಡೆಂಬ ತಾರತಮ್ಯವಾಗಲಿ ಇಲ್ಲ. ಸ್ನೇಹ – ಬಾಂಧವ್ಯಗಳು ವೈಯಕ್ತಿಕ ನೆಲೆಗಟ್ಟನ್ನು ಮೀರಿ ವಿಶ್ವವನ್ನೇ ಒಗ್ಗೂಡಿಸುವ ಏಕಮಂತ್ರವಾಗಿದೆ.



ಗೆಳೆತನದ ಸುವಿಶಾಲ ಆಲದಡಿ ಪಸರಿಸಿಹ
ತಣ್ಣೆಳಲ ತಂಪಿನಲಿ ತಂಗಿರುವೆನು;
ಜೀವನದನಂತ ದುರ್ಭರ ಬವಣೆ ನೋವುಗಳ
ಕಾವುಗಳ ಮೌನದಲಿ ನುಂಗಿರುವೆನು
ಗೆಳೆತನವೆ ಇಹಲೋಕಕಿರುವ ಅಮೃತ
ಅದನುಳಿದರೇನಿಹುದು–ಜೀವನ್ಮೃತ!

ಇಲ್ಲಿ ವಂಚನೆಯಿಲ್ಲ ಚಂಚಲತೆಯಿನಿತಿಲ್ಲ
ಮೇಲು ಕೀಳುಗಳೆಂಬ ಭೇದವಿಲ್ಲ
ಅಹಮಿಕೆಯ ನೆವಮಿಲ್ಲ ದ್ವೇಷ ಗುಣಮಣಮಿಲ್ಲ
ಸಣ್ಣತನ ಸಂಕೋಚ ಮೊದಲಿಗಿಲ್ಲ
ಮನವು ಬಾನಗಲ, ಎದೆ ತಿಳಿಗೊಳದೊಲು
ಭಾವ ಶುದ್ಧ ಸ್ಫಟಿಕ – ಬೆಳದಿಂಗಳು!



ಉಪ್ಪಿಗಿಂತಲು ರುಚಿಯು ತಾಯಿಗಿಂತಲು ಬಂಧು
ಇಲ್ಲೆಂಬ ಗಾದೆನುಡಿ ಕೇಳಿರುವೆನು.
ಗೆಳೆತನದ ಶುಚಿರುಚಿಯು ಇದಕು ಮಿಗಿಲಾಗಿಹುದು
ಎಂಬ ಸಾಹಸ ಮಾಡೆ ದೋಷವೇನು?
ಕಂಡ ಕಂಡವರೇನು ಬಲ್ಲರಿದನು
ಉಂಡವನು ಕಂಡಿಹನು ಇದರ ಹದನು.

ಹೇಗೊ ಹೇಗೋ ಹೆಗಲುಗೊಟ್ಟು ಬಂದಿಹ ಕೂರ್ಮೆ
ಆಗು ಹೋಗುಗಳಿಂಗೆ ಬಾಗದಂತೆ,
ಸುಖಕೆ ಸಂತಸಬಟ್ಟು ದು:ಖದಲಿ ಸಹಭಾಗಿ –
ಯಾಗೆ ಜೀವನ ರಸದ ಪಾಕದಂತೆ –
ಸರಸವಿರಸವನೆಲ್ಲ ಅಪ್ಪುಕಯ್ದು
ಬಾಳುವರು ಗಂಧದೊಲು ಜೀವ ತೆಯ್ದು!

## ಕೃತಿಕಾರರ ಪರಿಚಯ



ಕನ್ನಡದ ಪ್ರಮುಖ ಕವಿಗಳಲ್ಲಿ **ಚೆನ್ನವೀರ ಕಣವಿ ೧೯೨೮** ಒಬ್ಬರು. ಗದಗ ಜಿಲ್ಲೆಯ **ಹೊಂಬಳ**ದವರು. ನವೋದಯ ಮತ್ತು ನವ್ಯ ಮಾರ್ಗಗಳ ಸಮನ್ವಯ ಸಾಧಿಸಿದ ಕವಿಯೆಂದೇ ಪ್ರಸಿದ್ಧರು. ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಕಟಣ ಮತ್ತು ವ್ಯಾಸಂಗ ವಿಸ್ತರಣ ವಿಭಾಗದ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ್ದರು.

**ಆಕಾಶಬುಟ್ಟಿ, ಭಾವಜೀವಿ, ಮಧುಚಂದ್ರ, ದೀಪಧಾರಿ, ಮಣ್ಣಿನ ಮೆರವಣಿಗೆ, ನೆಲಮುಗಿಲು, ಕಾವ್ಯಾಕ್ಷಿ, ಚಿರಂತನ ದಾಹ** ಇವರ ಪ್ರಮುಖ ಕವನ ಸಂಕಲನಗಳು. ಕರ್ನಾಟಕ ಅಕಾಡೆಮಿ ಗೌರವ ಪ್ರಶಸ್ತಿ, ೧೯೮೧ ರಲ್ಲಿ **ಜೀವಧ್ವನಿ** ಕವನ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿವೆ. ೧೯೯೬ ರಲ್ಲಿ ಹಾಸನದಲ್ಲಿ ನಡೆದ ೬೫ ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**ಗೆಳೆತನ** ಕವನವನ್ನು **ಚೆನ್ನವೀರ ಕಣವಿ** ಅವರ **ಆಕಾಶಬುಟ್ಟಿ** ಕವನ ಸಂಕಲನ (ಪುಟ ೩೫-೩೬) ದಿಂದ ಆಯ್ದು ಸಂಪಾದಿಸಿ ನಿಗದಿಪಡಿಸಿದೆ.



## ಆಶಯ ಭಾವ

ಕವನದಲ್ಲಿ ಗೆಳೆತನ, ಅದರ ಸವಿ, ಮಹತ್ವ ಹಾಗೂ ಅನ್ಯೋನ್ಯತೆಯ ಬಗ್ಗೆ ತಾತ್ವಿಕ ನೆಲೆಯಲ್ಲಿ ಪ್ರಸ್ತಾಪಿಸಿದ್ದಾರೆ. ಗೆಳೆತನಕ್ಕೆ ಪೌರಾಣಿಕ, ಐತಿಹಾಸಿಕ ಹಾಗೂ ಸಮಕಾಲೀನ ಬದುಕಿನಲ್ಲಿ ಮಿಗಿಲಾದ ಸ್ಥಾನವಿರುವುದನ್ನು ತಿಳಿಸಿಕೊಟ್ಟಿದ್ದಾರೆ. ಆಧುನಿಕ ಪ್ರಪಂಚದಲ್ಲಿ ಗೆಳೆತನ ವೈಯಕ್ತಿಕ ನೆಲೆಯಿಂದ ವಿಶ್ವಸಾಮರಸ್ಯದ ನೆಲೆಗೆ ಧಾವಿಸುತ್ತಿರುವ ಸಂದರ್ಭದಲ್ಲಿ ಈ ಕವಿತೆ ಮಹತ್ವವನ್ನು ಪಡೆದಿದೆ. ಇದೇ ಕವಿತೆಯ ಆಂತರ್ಯಭಾವ.

* * *

## ಪದಗಳ ಅರ್ಥ

ಅಪ್ಪುಕಯ್- ಒಪ್ಪಿಕೊಳ್ಳು, ಸ್ವೀಕರಿಸು; ಅಹಮಿಕೆ - ಅಹಂಕಾರ ; ಇಹಲೋಕ - ಭೂಲೋಕ; ಕೂರ್ಪು - ಒಲವು, ಪ್ರೀತಿ ; ಚಂಚಲತೆ - ಸ್ಥಿರವಲ್ಲದ; ಜೀವನ್ಮೃತ - ಬದುಕಿದ್ದೂ ಸತ್ತಂತಿರುವ ; ತಂಗು - ಇಳಿದುಕೋ, ಬೀಡುಬಿಡು ; ದುರ್ಭರ - ತಾಳಲಾಗದ; ದೋಷ - ತಪ್ಪು, ಕುಂದುಕೊರತೆ; ನುಡಿ - ಮಾತು ; ನೆವ - ಕಾರಣ ; ಪಸರಿಸು - ಹರಡು, ವಿಸ್ತರಿಸು; ಬವಣೆ - ಕಷ್ಟ ; ಬಾಗು - ಮಣಿ, ಬಗ್ಗು, ಶರಣಾಗು ; ಮಿಗಿಲು - ಶ್ರೇಷ್ಠ ; ರಸಪಾಕ- ರುಚಿಯಾದ ಅಡುಗೆ; ವಂಚನೆ - ಮೋಸ ; ಹದ - ಪಕ್ವತೆ, ಸರಿಯಾದ ಸ್ಥಿತಿ.

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಕವಿ ಎಲ್ಲಿ ತಂಗಿದ್ದಾರೆ?

೨. ಕವಿ ಮೌನದಲ್ಲಿ ಏನನ್ನು ನುಂಗಿದ್ದಾರೆ?

೩. ಗೆಳೆತನದ ಮನಸ್ಸಿನ ಭಾವನೆ ಹೇಗಿದೆ?

೪. ಉಪ್ಪು ಮತ್ತು ತಾಯಿಯ ಬಗೆಗಿರುವ ಗಾದೆ ಯಾವುದು?

**ಆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ಗೆಳೆತನದಲ್ಲಿ ಯಾವ ದುರ್ಗುಣಗಳು ಇಲ್ಲವೆಂದು ಹೇಳಲಾಗಿದೆ?

೨. ಗೆಳೆತನದ ಶುಚಿರುಚಿ ಎಂಥದ್ದು?

೩. ಜೀವನ ರಸಪಾಕವಾಗುವುದು ಹೇಗೆ?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ನಾಲ್ಕು-ಐದು ವಾಕ್ಯಗಳಲ್ಲಿ ಉತ್ತರಿಸಿ.**

೧. ಗೆಳೆತನ ಇಹಲೋಕಕಿರುವ ಅಮೃತ ಹೇಗೆ? ತಿಳಿಸಿ.

೨. ಗೆಳೆಯರ ಮನಸ್ಸಿನ ಭಾವನೆ ಹೇಗಿರುತ್ತದೆ? ವಿವರಿಸಿ

೩. ಗೆಳೆಯರು ಹೇಗೆ ಬಾಳುತ್ತಾರೆ?

೪. ಗೆಳೆತನವನ್ನು ನಿನ್ನ ಮಾತುಗಳಲ್ಲಿ ವಿವರಿಸು?

**ಈ. ಕೊಟ್ಟಿರುವ ಪ್ರಶ್ನೆಗೆ ಎಂಟು-ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಗೆಳೆತನದ ಮಹತ್ವವನ್ನು ಕಣವಿ ಅವರು ಹೇಗೆ ತಿಳಿಸಿದ್ದಾರೆ?

**ಉ. ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ಅದನುಳಿದರೇನಿಹುದು_ ಜೀವನ್ಮೃತ!"

೨. "ಭಾವ ಶುದ್ಧ ಸ್ಫಟಿಕ_ ಬೆಳದಿಂಗಳು!"

೩. "ಕಂಡ ಕಂಡವರೇನು ಬಲ್ಲರಿದನು"

೪. "ಬಾಳುವರು ಗಂಧದೊಲು ಜೀವ ತೆಯ್ದು!"

ಊ. ಗುಂಪಿಗೆ ಸೇರದ ಪದವನ್ನು ಗುರುತಿಸಿ.

೧. ಹೆಗಲುಗೊಟ್ಟು ಸಂತಸಬಟ್ಟು ಉಂಡವನು ತಿಳಿಗೊಳ

೨. ಲೋಕ ಅಮೃತ ಎದೆ ಸಾಹಸ

೩. ಭಾವಜೀವಿ ಕಾವ್ಯಾಕ್ಷಿ ದೀಪಧಾರಿ ಜೀವಧ್ವನಿ

೪. ಬಾನು ಆಕಾಶ ಭಾನು ಗಗನ

## ಪಠ್ಯಾಧಾರಿತ ಚಟುವಟಿಕೆ

**ಕೊಟ್ಟಿರುವ ಪದ್ಯಭಾಗವನ್ನು ಕಂಠಪಾಠ ಮಾಡಿ.**

೧. ಉಪ್ಪಿಗಿಂತಲು ರುಚಿಯು __ __ __ __ ___ ___ ಇದರ ಹದನು (ಆರು ಸಾಲು)

## ಪೂರಕ ಓದು

- ಭಾರತೀಯ ವಿದ್ಯಾಭವನದ ಭಾರತ ಭಾರತಿ ಪುಸ್ತಕಮಾಲೆಯ **ಕೃಷ್ಣ–ಕುಚೇಲರ** ಸ್ನೇಹ ಕತೆಯನ್ನು ಓದಿ.
- ಪಂಚತಂತ್ರ ಹಾಗೂ ಇತರ ಕೃತಿಗಳಲ್ಲಿ ಗೆಳೆತನದ ಕುರಿತು ಕತೆಗಳನ್ನು ಓದಿರಿ.

✦ ✦ ✦ ✦ ✦

# ೪. ಭರವಸೆ




**ಬಿ.ಟಿ. ಲಲಿತಾನಾಯಕ್–**

**ಪ್ರವೇಶ :** ಆಧುನಿಕ ಕನ್ನಡ ಕಾವ್ಯ ಮಹತ್ವದ ಘಟ್ಟಗಳಲ್ಲಿ ದಲಿತ – ಬಂಡಾಯ ಸಾಹಿತ್ಯ ಚಳುವಳಿಯೂ ಒಂದು. ಈ ಸಾಹಿತ್ಯವು ಚಳುವಳಿ ಅರ್ಥದಲ್ಲಿ ಅನ್ವರ್ಥವಾಗಿ ರೂಪುಗೊಂಡಿದ್ದು, ಏಕಕಾಲದಲ್ಲಿ ಸಾಹಿತ್ಯ ಮತ್ತು ಸಂಘಟನೆಯ ಸ್ವರೂಪವನ್ನು ತಾಳಿ ಮಹತ್ವದ ನಿರೀಕ್ಷೆಗಳನ್ನು ಹುಟ್ಟುಹಾಕಿದೆ. ಸಮಾಜದಲ್ಲಿ ಶೋಷಿತರ ಪರವಾದ ನಿಲುವುಗಳನ್ನು ಬಂಡಾಯ ಸಾಹಿತ್ಯದಲ್ಲಿ ಕಾಣಬಹುದು. ಈ ಸಾಹಿತ್ಯವು ಸಾಮಾಜಿಕ ಅಸಮಾನತೆ, ಶೋಷಣೆಯ ಪ್ರತಿಭಟನೆಯ ವಿಷಯವನ್ನು ಒಳಗೊಂಡಿದೆ. ಶೋಷಣೆ ಎನ್ನುವುದು ಕೇವಲ ಮನುಕುಲಕ್ಕೆ ಮಾತ್ರ ಸೀಮಿತವಾಗಿರದೆ ಮಾನವರಿಂದ ಪ್ರಕೃತಿಯ ಮೇಲಾಗುವ ದೌರ್ಜನ್ಯ, ಇದರಿಂದಾಗುವ ಪರಿಣಾಮಗಳ ಬಗ್ಗೆಯೂ ಸಹ ಮಾರ್ಮಿಕವಾಗಿ ಈ ಸಾಹಿತ್ಯ ಪ್ರಕಾರದಲ್ಲಿ ಚಿತ್ರಿತವಾಗುತ್ತಿದೆ.

ಪ್ರಕೃತ ಕವನದಲ್ಲಿ ಕೃತಕತೆಯ ಜಾಲಕ್ಕೆ ಸಿಲುಕಿ ಸ್ವಾರ್ಥಿಯಾದ ಮಾನವನು ನಿಸರ್ಗದ ನೈಜತೆಗೆ ಹೇಗೆ ವಿನಾಶಕಾರಿಯಾಗಿದ್ದಾನೆ ಎಂಬ ಪ್ರತಿಭಟನೆಯನ್ನು ವ್ಯಕ್ತಪಡಿಸಲಾಗಿದೆ. ನಿತ್ಯನೂತನೆಯಾದ ಈ ಭೂಮಿ ಬರಡಲ್ಲ, ಇವೆಲ್ಲವನ್ನು ಮೀರಿ ತನ್ನ ಅಮೃತತ್ವದ ಗುಣದ ಮೂಲಕ ಪ್ರೇಮದ ಒರತೆಯನ್ನು ಹರಿಸಿ ಜೀವ ಸಂಜೀವಿನಿಯಾಗುವ ಗುಣವಿದೆ ಎಂಬ ಭರವಸೆಯನ್ನು ಇಲ್ಲಿ ಅಭಿವ್ಯಕ್ತಗೊಳಿಸಲಾಗಿದೆ.





ಅರಳಿ ಮಲ್ಲಿಗೆ ಮೊಗ್ಗು ಸುತ್ತ ಗಂಧವ ಚೆಲ್ಲಿ
ವಸಂತನಾಗಮನ ಸಾರಿದಾಗ
ಮಾಮರದ ರೆಂಬೆಯಲಿ ಕುಳಿತಿದ್ದ ಕೋಗಿಲೆಯು
ಬೆರೆಸಿತದರೊಳಗೊಂದು ಕುಕಿಲರಾಗ

ಬಳುಕಾಡಿ ಮಲ್ಲಿಗೆಯು ಕೋಗಿಲೆಯ ಕರೆದಿತ್ತು;
"ಪ್ರಿಯ ಗೆಳತಿ ಹಾಡೊಂದ ಹಾಡೇ

ಬಾನಸಂಚಾರಿಣಿಯೆ ಅನುಭವದ ಹೊನ್ನಗಣಿಯೆ
ಲೋಕವಾರ್ತೆಯದೇನು ಅರುಹೆ”

“ಏನೆಂದು ಹಾಡಲಿ ನಾನು ಏನ ಅರುಹಲಿ ಚೆಲುವೆ
ಬಣ್ಣ ಬೆಡಗಿನ ಮಾತನರಿಯೆ
ಕೃತಕತೆಯ ಜಾಲದಲಿ ಸಿಲುಕಿಕೊಂಡಿದೆ ಜಗವು
ನೈಜತೆಗೆ ಇಲ್ಲ ಬೆಲೆಯು

ಪ್ರಕೃತಿಯ ಸಿರಿಮುಡಿಗೆ ಕೊಡಲಿ ಹಾಕಿದ ಮನುಜ
ಸ್ವಾರ್ಥದಲಿ ಮುಳುಗಿಹನು ಪೂರ
ಭಿತ್ತಿಯಲಿ ಬಿಡಿಸುವನು ಗಿಡಬಳ್ಳಿ ಚಿತ್ತಾರ
ಮರೆತೇಬಿಟ್ಟಿಹನು ಮಣ್ಣ ಸೊಗಡ್ಸ

ಮಾವು ಮಲ್ಲಿಗೆ ಭ್ರಮರ ಮತ್ತದರ ಝೇಂಕಾರ
ಕವಿ ಕಲ್ಪನೆಯ ಗಾನಲಹರಿ
ನಲುಗದಿರು ಇದ ಕೇಳಿ ಬರಡಲ್ಲ ಈ ಬುವಿಯು
ಅಮರ ಪ್ರೇಮದ ಒರತೆ ಹರಿಯುವುದು ಉಂಟು ಅಲ್ಲಲ್ಲಿ”



## ಕೃತಿಕಾರರ ಪರಿಚಯ



**ಶ್ರೀಮತಿ ಬಿ. ಟಿ. ಲಲಿತಾನಾಯಕ್** ಅವರು ಚಿಕ್ಕಮಗಳೂರು ಜಿಲ್ಲೆಯ ತಂಗಲಿ ತಾಂಡ್ಯದಲ್ಲಿ ೦೪.೦೪.೧೯೪೫ರಲ್ಲಿ ಜನಿಸಿದರು. ಬಂಡಾಯ ಹಾಗೂ ಸ್ತ್ರೀ ಸಂವೇದನೆಯ ಬರೆಹಗಳ ಮೂಲಕ ಖ್ಯಾತರಾದ ಇವರು ಹಲವಾರು ಮೌಲಿಕ ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ. **ಚಂದ್ರ ಪರಾಭವ, ಭಟ್ಟನ ಕನಸು, ನೆಲೆಬೆಲೆ, ನಂ ರೂಪ್ಲಿ, ಗತಿ, ಹಬ್ಬ ಮತ್ತು ಬಲಿ, ಇದೇ ಕೂಗು ಮತ್ತೆ ಮತ್ತೆ, ದೇವದುರ್ಗ ತಾಲೂಕು ದರ್ಶನ, ಒಡಲ ಬೇಗೆ** ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. **ಮಕ್ಕಳ ಕತೆ, ರೇಡಿಯೋ ನಾಟಕ**ಗಳನ್ನೂ ರಚಿಸಿರುವರು. ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯೆಯಾಗಿಯೂ ಕರ್ನಾಟಕ ಸರಕಾರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆಯಾಗಿಯೂ ಕಾರ್ಯ ನಿರ್ವಹಿಸಿರುವರು.

## ಆಶಯ ಭಾವ

ಜಗತ್ತಿನ ತಲ್ಲಣಗಳನ್ನು ಮಲ್ಲಿಗೆ ಮತ್ತು ಕೋಗಿಲೆಯ ಸಂಭಾಷಣೆಯ ಮೂಲಕ ವ್ಯಕ್ತಪಡಿಸಿರುವ ಕವನ **ಭರವಸೆ.** ಲೋಕವಾರ್ತೆಯನ್ನು ನುಡಿಯುವ ಕೋಗಿಲೆಯ ಧ್ವನಿಯಲ್ಲಿರುವ ನಿರಾಸೆ, ಅವಾಸ್ತವಿಕ ಬದುಕಿನ ಬಗೆಗಿನ ವಿಷಾದ ಈ ಕವನದ ಒಡಲು. ಇಲ್ಲಿ ಪ್ರಕೃತಿಯ ನೈಜತೆಗೆ ಮನುಷ್ಯನ ಸ್ವಾರ್ಥ ಹೇಗೆ ಧಕ್ಕೆಯಾಗುತ್ತಿದೆ ಎಂಬ ಆತಂಕವಿದೆ. ಈ ಮಣ್ಣಿನ ಗುಣವನ್ನು ಬಿಟ್ಟು ಭ್ರಮೆಯಲ್ಲಿ ಮುಳುಗಿರುವ ವ್ಯಕ್ತಿಯ ಬಗ್ಗೆ ಇಲ್ಲಿ ಸುಪ್ತ ಪ್ರತಿಭಟನೆ ಇದೆ. ಆದರೆ ಅದೇ

ಪ್ರತಿಭಟನೆಯ ಕೊನೆಯಲ್ಲಿ ಆಶಾವಾದದ ಸಾಂತ್ವನವಿದೆ. ಈ ಭೂಮಿ ಬರಡಲ್ಲ. ಅಮರ ಪ್ರೇಮದ ಒರತೆ ಎನ್ನುವ ಮೂಲಕ ಭೂಮಿಯ ಸಂಜೀವಿನೀ ಗುಣವನ್ನು ಪ್ರಕೃತ ಕವಿತೆಯಲ್ಲಿ ಎತ್ತಿ ಹಿಡಿಯಲಾಗಿದೆ. ಅದೇ ಕವಿತೆಯ ಆಶಯ ದನಿ.

ಪ್ರಸ್ತುತ ಕವನವನ್ನು **ಬಿ. ಟಿ. ಲಲಿತಾ ನಾಯಕ್** ಅವರ **ಬಿದಿರು ಮೆಳೆ ಕಂಟಿಯಲಿ** ಕವನ ಸಂಕಲನ (ಪುಟ ೧೨೧-೨೨) ದಿಂದ ಆಯ್ದು ಸಂಪಾದಿಸಿ ನಿಗದಿಪಡಿಸಿದೆ.

* * *

## ಪದಗಳ ಅರ್ಥ

ಅರುಹು-ತಿಳಿಸು, ಹೇಳು; ಕುಕಿಲು-ಕೋಗಿಲೆಯ ಕೂಗು; ಕೃತಕತೆ-ಅಸಹಜತೆ ಮೋಸ; ಚಿತ್ತಾರ-ಚಿತ್ರ; ಜಾಲ-ಗುಂಪು, ಸಮೂಹ; ಪೂರ-ಪೂರ್ತಿಯಾಗಿ; ಬರಡು-ನಿಸ್ಸಾರ; ಬಾನ ಸಂಚಾರಿಣಿ- ಆಕಾಶದಲ್ಲಿ ಸಂಚರಿಸುವ: ಭಿತ್ತಿ-ಗೋಡೆ; ಭ್ರಮರ-ದುಂಬಿ; ಮಾಮರ-ಮಾವಿನಮರ; ಮೊಗ್ಗು - ಅರಳದೇ ಇರುವ ಹೂ; ಸೊಗಡು-ಕಂಪು, ವಾಸನೆ; ಹೊನ್ಗಣಿ-ಚಿನ್ನದಗಣಿ;

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಕೋಗಿಲೆ ಕುಕಿಲರಾಗವನ್ನು ಯಾವಾಗ ಬೆರೆಸಿತು?

೨. ಮನುಷ್ಯ ಸ್ವಭಾವದ ಬಗ್ಗೆ ಕವಯಿತ್ರಿಯ ಅಭಿಪ್ರಾಯವೇನು?

೩. ಕನ್ನಡ ಸಾರಸ್ವತ ಲೋಕಕ್ಕೆ ಬಿ.ಟಿ. ಲಲಿತಾನಾಯಕ್ ಅವರ ಕೊಡುಗೆ ಏನು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ಮಲ್ಲಿಗೆ ಕೋಗಿಲೆಯನ್ನು ಕರೆದು ಏನು ಹೇಳಿತು?

೨. ಮಲ್ಲಿಗೆಯ ಕೋರಿಕೆಗೆ ಕೋಗಿಲೆ ಪ್ರಕೃತಿಯ ಬಗ್ಗೆ ಏನೆಂದು ಉತ್ತರ ನೀಡಿತು?

೩. ಕೋಗಿಲೆಯ ಆಶಾವಾದವೇನು?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು-ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಮಲ್ಲಿಗೆ ಮತ್ತು ಕೋಗಿಲೆಯ ಸಂಭಾಷಣೆಯನ್ನು ಬರೆಯಿರಿ

೨. ಕೋಗಿಲೆ ತಿಳಿಸಿದ ಲೋಕವಾರ್ತೆ ಏನು? ವಿವರಿಸಿ

**ಈ. ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ಬೆರೆಸಿತದರೊಳಗೊಂದು ಕುಕಿಲರಾಗ"

೨. "ನೈಜತೆಗೆ ಇಲ್ಲ ಬೆಲೆಯು"

೩. "ಅಮರ ಪ್ರೇಮದ ಒರತೆ ಹರಿಯುವುದು ಉಂಟು ಅಲ್ಲಲ್ಲಿ"

**ಉ. ಹೊಂದಿಸಿ ಬರೆಯಿರಿ.**

| ಅ | ಬ |
|---|---|
| ೧. ಬಾನಸಂಚಾರಿಣಿ | ಝೇಂಕಾರ |
| ೨. ಭಿತ್ತಿ | ನೈಜತೆ |
| ೩. ಭ್ರಮರ | ಕವಿಕಲ್ಪನೆ |
| ೪. ಕೃತಕತೆ | ಕೋಗಿಲೆ |
| ೫. ಗಾನಲಹರಿ | ಗೋಡೆ |
| | ಸಿರಿಮುಡಿ |

**ಪೂರಕ ಓದು**

✦ **ಬಿ. ಟಿ. ಲಲಿತಾನಾಯಕ್** ಅವರ **ಬಿದಿರುಮೆಳೆ ಕಂಟಿಯಲಿ** ಕವನ ಸಂಕಲನದ ಇತರ ಕವಿತೆಗಳನ್ನು ಓದಿ.

✦ ✦ ✦ ✦ ✦

# ೫. ವಚನಾಮೃತ




**ಅಲ್ಲಮಪ್ರಭು, ಆಯ್ದಕ್ಕಿ ಮಾರಯ್ಯ, ಅಮುಗೆರಾಯಮ್ಮ, ಶಿವಶರಣೆ ಲಿಂಗಮ್ಮ.**

**ಪ್ರವೇಶ :** ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೨ನೆಯ ಶತಮಾನ ಅತ್ಯಮೂಲ್ಯವಾದುದು. ಪಾಂಡಿತ್ಯಯುಕ್ತವಾಗಿದ್ದ ಸಾಹಿತ್ಯ ಜನಸಾಮಾನ್ಯರ ದನಿಯಾಗಿ, ಶ್ರೀಸಾಮಾನ್ಯನ ಬದುಕು ಬವಣೆಯ ಪ್ರತಿನಿಧಿಯಾಗಿ ಸಾಮಾಜಿಕ, ಸಾಹಿತ್ಯಿಕ ಕ್ರಾಂತಿಯನ್ನುಂಟು ಮಾಡಿದ್ದು ವಚನಸಾಹಿತ್ಯ. ಶರಣರ ಈ ಸಾಹಿತ್ಯ ವಿಶ್ವಕ್ಕೆ ಮಾದರಿ ಮತ್ತು ಸಾಮಾಜಿಕ ಸಮಾನತೆಗೆ ಹಿಡಿದ ಕೈಗನ್ನಡಿಯಾಗಿದೆ. 'ಅರಿತರೆ ಶರಣ ಮರೆತರೆ ಮಾನವ' ಎಂಬುದು ಶರಣ ತತ್ವದ ಮಹಾವಾಕ್ಯ. 'ಶ್ರೀಸಾಮಾನ್ಯರು ಮಹಾಜ್ಞಾನವನ್ನರಿತಾಗ ನಿತ್ಯ ಮುಕ್ತನಾಗುತ್ತಾನೆ' ಎಂಬ ಶರಣರ ಮಾತುಗಳು, ವಚನ, ಸೂಳ್ನುಡಿಗಳು ಸಾಮಾನ್ಯರನ್ನು ದೈವತ್ವಕ್ಕೆ ಏರಿಸುತ್ತವೆ. ತಮ್ಮ ಕಾಯಕ ನಿಷ್ಠೆಯ ಮೂಲಕ ಸಾಮಾಜಿಕ ಜಾಗೃತಿಯನ್ನುಂಟು ಮಾಡಲು ಗಂಡು ಹೆಣ್ಣೆಂಬ ಭೇದಭಾವವಿಲ್ಲದೆ, ಮೇಲುಕೀಳೆಂಬ ತಾರತಮ್ಯವಿಲ್ಲದೆ ಶಿವಶರಣರು ತಮ್ಮ ಇಷ್ಟದೇವರ ಹೆಸರನ್ನೇ ಅಂಕಿತವಾಗಿಸಿ ವಚನಗಳನ್ನು ರಚಿಸಿದ್ದಾರೆ. ಇಂತಹ ವಚನಗಳ ಅಮೃತವನ್ನುಣಿಸುವ, ಪರಿಚಯಿಸುವ ಉದ್ದೇಶದಿಂದ ಈ ವಚನಗಳನ್ನು ಅಳವಡಿಸಲಾಗಿದೆ.



ಕೃತಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬಡಿದು ಬುದ್ಧಿಯ
ಕಲಿಸಿದರೆ, ಆಗಲಿ ಮಹಾ ಪ್ರಸಾದವೆಂದೆನಯ್ಯ
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ
ಕಲಿಸಿದರೆ, ಆಗಲಿ ಮಹಾ ಪ್ರಸಾದವೆಂದೆನಯ್ಯ
ದ್ವಾಪರಯುಗದಲ್ಲಿ ಶ್ರೀಗುರುವು ಶಿಷ್ಯಂಗೆ ಝುಂಕಿಸಿ ಬುದ್ಧಿಯ
ಕಲಿಸಿದರೆ, ಆಗಲಿ ಮಹಾ ಪ್ರಸಾದವೆಂದೆನಯ್ಯ
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ
ಕಲಿಸಿದರೆ, ಆಗಲಿ ಮಹಾ ಪ್ರಸಾದವೆಂದೆನಯ್ಯ
ಗುಹೇಶ್ವರ, ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ
ನಾ ಬೆರಗಾದೆನು.

**–ಅಲ್ಲಮಪ್ರಭು**

ಕಾಯಕದಲ್ಲಿ ನಿರತನಾಡೆ
ಗುರುದರ್ಶನವಾದಡೂ ಮರೆಯಬೇಕು;
ಲಿಂಗಪೂಜೆಯಾದಡೂ ಮರೆಯಬೇಕು
ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು
ಕಾಯಕವೆ ಕೈಲಾಸವಾದ ಕಾರಣ
ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು – **ಆಯ್ದಕ್ಕಿ ಮಾರಯ್ಯ**

ಕಾಗೆಯಮರಿ ಕೋಗಿಲೆಯಾಗಬಲ್ಲುದೆ ?
ಆಡಿನಮರಿ ಆನೆಯಾಗಬಲ್ಲದೆ ?
ಸೀಳ (ಳು) ನಾಯಿ ಸಿಂಹದ ಮರಿಯಾಗಬಲ್ಲುದೆ ?
ಅರಿವು ಆಚಾರ ಸಮ್ಯಜ್ಞಾನವನರಿಯದೆ
ನಾಮವ ಹೊತ್ತುಕೊಂಡು ತಿರುಗುವ ಗಾವಿಲರ
ಮುಖವ ನೋಡಲಾಗದು ಅಮುಗೇಶ್ವರಾ. – **ಅಮುಗೆರಾಯಮ್ಮ**

ಮನವ ಗೆದ್ದೆಹನೆಂದು, ತನುವ ಕರಗಿಸಿ ಕಾಯವ ಮರುಗಿಸಿ,
ನಿದ್ರೆಯ ಕೆಡಿಸಿ ವಿದ್ಯೆಯ ಕಲಿತಿಹನೆಂಬ ಬುದ್ಧಿಹೀನರಿರಾ ನೀವು ಕೇಳಿರೋ
ನಮ್ಮ ಶರಣರು ಮನವನೆಂತು ಗೆದ್ದಿಹರೆಂದಡೆ
ಕಾಮ ಕ್ರೋಧವ ನೀಗಿ, ಲೋಭ ಮೋಹ ಮದಮತ್ಸರವ ಛೇದಿಸಿ,
ಆಸೆ ರೋಷವಳಿದು, ಜಗದ ಪಾಶವ ಬಿಟ್ಟು,
ಆ ಮರುಗಿಸುವ ಕಾಯವನೆ ಪ್ರಸಾದ ಕಾಯವ ಮಾಡಿ ಸಲಹಿದರು
ಕೆಡಿಸುವ ನಿದ್ರೆಯೆನೆ ಯೋಗ ಸಮಾಧಿಯ ಮಾಡಿ,
ಸುಖವನೇಡಿಸಿ ಜಗವನೆ ಗೆದ್ದ ಶರಣರ ಬುದ್ಧಿಹೀನರೆತ್ತ ಬಲ್ಲರೊ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣ? – **ಶಿವಶರಣೆ ಲಿಂಗಮ್ಮ**

## ಕೃತಿಕಾರರ ಪರಿಚಯ



**ಅಲ್ಲಮಪ್ರಭು:** ಅಲ್ಲಮಪ್ರಭು ೧೨ನೇ ಶತಮಾನದ ಪ್ರಸಿದ್ಧ ಚಿಂತಕ, ತತ್ವಜ್ಞಾನಿ, ಶಿವಶರಣ ಮತ್ತು ವಚನಕಾರ. ಈತನು ಜನಿಸಿದ್ದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವಿಯಲ್ಲಿ. ಈತನ ತಂದೆ ನಿರಹಂಕಾರ ಮತ್ತು ತಾಯಿ ಸುಜ್ಞಾನಿ. ಈತ ಕಲ್ಯಾಣದಲ್ಲಿ ಬಸವಣ್ಣ ಸ್ಥಾಪಿಸಿದ 'ಶೂನ್ಯ ಪೀಠ'ದ ಅಧ್ಯಕ್ಷನಾಗಿ ಅನೇಕರಿಗೆ ಮಾರ್ಗದರ್ಶನ ನೀಡಿದವನು. ಅವನು ಒಬ್ಬ ಅನುಭಾವಿ. ಸತ್ಯಶೋಧನೆಯೇ ಅವನಜೀವನದ ಪರಮ ಗುರಿಯಾಗಿತ್ತು. ಅವನ ವಚನಗಳು ಬೆರಗು ಮತ್ತು ಬೆಡಗಿನಿಂದ ಕೂಡಿವೆ. 'ಗುಹೇಶ್ವರಾ' ಎಂಬುದು ಈತನ ವಚನಗಳ ಅಂಕಿತ.

## ಆಶಯ ಭಾವ

ತಂದೆ, ತಾಯಿ, ಗುರುಗಳಿಗೆ ದೈವತ್ವದ ಸ್ಥಾನ ಮಾನ ನೀಡಿರುವ ಸಂಸ್ಕೃತಿ ನಮ್ಮದು. ಗುರುವಿನ ಸ್ಥಾನ ಬಹಳ ಪವಿತ್ರವಾದದ್ದು. ಗುರುವಿಗೆ ಸೃಷ್ಟಿ, ಸ್ಥಿತಿ, ಲಯಕಾರಕರಾದ ಬ್ರಹ್ಮ, ವಿಷ್ಣು, ಮಹೇಶ್ವರರ ಸ್ಥಾನವನ್ನು ನೀಡಿ ಗೌರವಿಸಲಾಗಿದೆ. ಏಕೆಂದರೆ ಶಿಷ್ಯನಿಗೆ ಸಂಸ್ಕಾರ, ವಿದ್ಯೆ, ವಿನಯ ಹಾಗೂ ಬದುಕಿನ ಮಾರ್ಗವನ್ನು ನೀಡುವವನು ಗುರು. ಪರಿವರ್ತನೆ ಜಗದ ನಿಯಮ. ಕಾಲಗತಿಯಲ್ಲಿ ಎಲ್ಲವೂ ಪರಿವರ್ತನೆಗೊಳಪಡುತ್ತದೆ ಎಂಬುದನ್ನು ಗುರುವಿನ ಸ್ಥಾನ ಹಾಗೂ ಶಿಷ್ಯನ ಕಲಿಕಾ ಪ್ರವೃತ್ತಿಗಳು ನಾಲ್ಕು ಯುಗಗಳಲ್ಲಿ ಹೇಗೆ ಪರಿವರ್ತನೆಯಾಗಿದೆ ಎಂಬುದನ್ನು ಮಾರ್ಮಿಕವಾಗಿ ಈ ವಚನದಲ್ಲಿ ಬಿಂಬಿತವಾಗಿದೆ.



* * * *



**ಆಯ್ದಕ್ಕಿ ಮಾರಯ್ಯ:** ಈತನ ಕಾಲ ಕ್ರಿ.ಶ.ಸು ೧೧೬೦. ಶಿವಶರಣ ಹಾಗೂ ವಚನಕಾರ, ರಾಯಚೂರು ಜಿಲ್ಲೆಯ ಅಮರೇಶ್ವರದ ಆಯ್ದಕ್ಕಿ ಲಕ್ಕಮ್ಮನ ಪತಿ. ಆಯ್ದಕ್ಕಿಮಾರಯ್ಯ ಎಂದೇ ಪ್ರಸಿದ್ಧ. ಈವರೆಗೆ ಈತನ ಸುಮಾರು ೩೨ ವಚನಗಳು ದೊರೆತಿವೆ. ಎಂಥ ಪರಿಸ್ಥಿತಿ ಎದುರಾದರು ಕಾಯಕವ ಬಿಡದೆ ಮಾಡಬೇಕು, ಕಾಯಕ ಮಾಡಿ ಬದುಕಬೇಕು, ಯಾಚನೆ ಮಾಡಬಾರದು ಹಾಗೂ ಕೂಡಿಡಬಾರದು ಎಂದು ಹೇಳುವ ಮೂಲಕ ಕಾಯಕಬದುಕಿನ ಮಹತ್ವವನ್ನು ಸಾರಿದ್ದಾರೆ. ಇಂತಹ ಆದರ್ಶವನ್ನು ಹೊಂದಿರುವ ಈತನ ಅಂಕಿತ 'ಅಮರೇಶ್ವರಲಿಂಗ' ಬೀದಿಯಲ್ಲಿ ಬಿದ್ದ ಅಕ್ಕಿಯನ್ನು ಆಯ್ದುತಂದು ದಾಸೋಹ ಮಾಡುವುದೇ ಅವರ ಕಾಯಕವಾಗಿತ್ತು.

## ಆಶಯ ಭಾವ

ಕಾಯಕವೇ ಕೈಲಾಸ ಎಂದು ಹೇಳುವ ಮೂಲಕ ಬಸವಣ್ಣ ಅವರು ಹೇಳಿದ ಕಾಯಕದ ಮಹತ್ವ ಆಯ್ದಕ್ಕಿಮಾರಯ್ಯ ಅವರ ವಚನಗಳಲ್ಲೂ ವ್ಯಕ್ತವಾಗಿದೆ. ಮನುಷ್ಯನಿಗೆ ಕಾಯಕವೇ ಮುಖ್ಯ. ಕಾಯಕದಲ್ಲೇ ಸರ್ವಸ್ವವನ್ನೂ ಕಾಣಬಹುದು. ಇದು ಶ್ರೇಷ್ಠ ಹಾಗೂ ಸಾರ್ವಕಾಲಿಕ ಸತ್ಯ. ಕರ್ತವ್ಯ ನಿಷ್ಠೆ ಮತ್ತು ಬದ್ಧತೆಯನ್ನು ಸಾರುವ ಈ ವಚನ ಇಂದಿಗೂ ಪ್ರಸ್ತುತ.

* * * *



**ಅಮುಗೆರಾಯಮ್ಮ:** ಈಕೆಯ ಕಾಲ ಕ್ರಿ.ಶ. ಸುಮಾರು ೧೧೬೦. ಹನ್ನೆರಡನೆಯ ಶತಮಾನದ ವಚನಕಾರ್ತಿಯರಲ್ಲಿ ಒಬ್ಬಳು. ಈಕೆ ಸೊನ್ನಲಿಗೆಯವಳು (ಈಗಿನ ಸೊಲ್ಲಾಪುರ), ಪತಿ ಅಮುಗೆ ದೇವಯ್ಯ. ನೇಯ್ಗೆ ಇವರ ಕಾಯಕ. ಈಕೆಯ ಅಂಕಿತನಾಮ 'ಅಮುಗೇಶ್ವರ '. ತಮ್ಮ ವೈಚಾರಿಕ ಪ್ರಖರತೆ ಹಾಗೂ ಸಾಮಾಜಿಕ ಕಳಕಳಿಯಿಂದ ಜೀವನವನ್ನು ವಿಭಿನ್ನ ದೃಷ್ಟಿಕೋನದಿಂದ ದರ್ಶಿಸಿ, ಚಿಂತನಗೈದು ವಚನ ರಚನೆಯ ಮಹಾಕಾಯಕವನ್ನು ರೂಢಿಸಿಕೊಂಡವರು. ಗಂಡು ಹೆಣ್ಣೆಂಬ ಸಾಂಪ್ರದಾಯಿಕ ವರ್ಗೀಕರಣದ ಚೌಕಟ್ಟಿನಿಂದ ಹೊರಬಂದು ಸಮಾನತೆಯ ತತ್ವದ ಆಧಾರದಿಂದ ತನ್ನ ಧೋರಣೆಯ ಛಾಪನ್ನು ವಚನಗಳಲ್ಲಿ ಮೂಡಿಸಿದ್ದಾಳೆ.

### ಆಶಯ ಭಾವ

ಪ್ರಕೃತಿಯಲ್ಲಿರುವ ಪ್ರಾಣಿ ಪಕ್ಷಿಗಳಲ್ಲಿ ವಿಶೇಷ ಗುಣಗಳು ಸಹಜವಾಗಿರುತ್ತವೆ. ಆದರೆ ಮಾನ ಹೊಂದಿರುವ ವಿಶೇಷ ಗುಣವನ್ನು ಇತರ ಪ್ರಾಣಿ ಪಕ್ಷಿಗಳು ಅನುಕರಿಸಲು ಸಾಧ್ಯವಿಲ್ಲ ಆದರಿಂದಾಗಿ ಮಾನವನು ಅರಿವು, ಆಚಾರ, ಸಮ್ಯಜ್ಞಾನ ಇವುಗಳಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದೆಂಬುದನ್ನು ಅಮುಗೆರಾಯಮ್ಮ ಈ ವಚನದ ಮೂಲಕ ಸ್ಪಷ್ಟಪಡಿಸಿದ್ದಾಳೆ.

* * * *



**ಶಿವಶರಣೆ ಲಿಂಗಮ್ಮ:** ಈಕೆಯ ಕಾಲ ಕ್ರಿ.ಶ. ಸುಮಾರು ೧೧೬೦. ಹನ್ನೆರಡನೆಯ ಶತಮಾನದ ವಚನಕಾರ್ತಿಯರಲ್ಲಿ ಒಬ್ಬಳು. ಕ್ಷೌರಿಕ ವೃತ್ತಿಯ ಹಡಪದ ಅಪ್ಪಣ್ಣನವರ ಧರ್ಮಪತ್ನಿ. ಈಕೆಯ ಅಂಕಿತನಾಮ 'ಅಪ್ಪಣ್ಣಪ್ರಿಯ ಚನ್ನಬಸವಣ್ಣ' ಎಂಬುದು. ವ್ಯಕ್ತಿಯ ಹುಟ್ಟಿಗೂ ಅವನ ಸಾಧಿಸುವ ಸಾಧನೆಗೂ ಏನೇನು ಸಂಬಂಧವಿಲ್ಲ ಎಂಬುದನ್ನು ನಿರೂಪಿಸಿದವಳು. ಈಕೆಯ ವಚನಗಳಲ್ಲಿ ಬೋಧನೆಯ ಧಾಟಿ, ಕಂಡದರ್ಶನ, ಬೀರಿದ ಬೆಳಕು,

ಏರಿದ ನಿಲುವು, ಸಾಧಕರಿಗೂ ಸಾಮಾನ್ಯರಿಗೂ ಶರಣರಿಗೂಇರುವ ವ್ಯತ್ಯಾಸವನ್ನು ತಿಳಿಸಿದ್ದಾಳೆ. ಎಲ್ಲೆಡೆಗೂ ಹರಿದಾಡುವ ಮನಸ್ಸನ್ನು ಸ್ವೇಚ್ಛೆಯಾಗಿ ಹರಿಯಲು ಬಿಡದೆ ಬಯಲಲ್ಲಿ ಓಡಾಡುವ ಶರಣರ ಪಾದದಲ್ಲಿ ಬೆರೆಯಬೇಕೆನ್ನುವವಳು.

**ಆಶಯ ಭಾವ**

ವಿದ್ಯೆ ಸಾಧಕನ ಸೊತ್ತು. ವಿದ್ಯೆವಿಹೀನನ ಬದುಕು ನಿರರ್ಥಕವೆಂಬುದು ಸರ್ವೇಸಾಮಾನ್ಯ ವಾದ ಅಭಿಪ್ರಾಯ. ಆದರೆ ವಿದ್ಯೆಯನ್ನು ಗಳಿಸಲು ನಡೆಸುವ ಕಸರತ್ತು, ಪರಿಶ್ರಮಗಳು, ವಿದ್ಯೆ ವಿನಯವನ್ನು ತಂದು ಕೊಡದೆ ಸಂಪಾದನೆಗೆ ದಾರಿಯಾಗಿರುವುದನ್ನು ನೆನೆದರೆ ವಿಷಾದವಾಗುತ್ತದೆ. ಆದರೆ ಅಂದೇ ನಮ್ಮ ಶಿವಶರಣರು ಜೀವನವೆಂಬ ಪಾಠಶಾಲೆಯಲ್ಲಿ ಅರಿಷಡ್ವರ್ಗಗಳನ್ನು ನಿಗ್ರಹಿಸಿ ತಮ್ಮ ತಮ್ಮ ಕಾಯದ ಮೂಲಕ ನಿತ್ಯ ಸುಖಿಗಳಾಗಿ ಜೀವನವನ್ನು ಸಾರ್ಥಕಗೊಳಿಸಿಕೊಂಡ ರೀತಿಯನ್ನು ತಮ್ಮ ಈ ವಚನದಲ್ಲಿ ಮಾರ್ಮಿಕವಾಗಿ ತಿಳಿಸಲಾಗಿದೆ.

ಪ್ರಸ್ತುತ ನಿಗದಿ ಪಡಿಸಿರುವ ವಚನಗಳನ್ನು **ಎಂ. ಎಂ. ಕಲಬುರ್ಗಿ** ಅವರು ಸಂಪಾದಿಸಿ ಪ್ರಕಟಿಸಿರುವ **'ಸಮಗ್ರ ವಚನ ಸಂಪುಟ'**ಗಳಿಂದ ಆಯ್ದುಕೊಂಡಿದೆ.

******

**ಪದಗಳ ಅರ್ಥ**

೧. ಬಡಿದು–ಹೊಡೆತಕೊಡು, ಹೊಡೆ ; ಪ್ರಸಾದ–ಅನುಗ್ರಹ, ಹರ್ಷ; ಝುಂಕಿಸು– ಗದರಿಸು, ಬೆದರಿಸು; ವಂದಿಸು–ನಮಸ್ಕರಿಸು; ಬೆರಗು–ಆಶ್ಚರ್ಯ, ಅಚ್ಚರಿ; ಕಟ್ಟಳೆ – ಪದ್ಧತಿ, ನಿಯಮ, ಅಪ್ಪಣೆ;

೨. ಕಾಯಕ–ಕಾರ್ಯ, ಕೆಲಸ, ಉದ್ಯೋಗ; ಜಂಗಮ–ಚಲನಶೀಲ, ಲೋಕಸಂಚಾರಿ, ವೀರಶೈವ ಧರ್ಮಾನುಸಾರ ವಿರಕ್ತ. ಹಂಗು–ಋಣ;

೩. ಅರಿವು–ತಿಳಿವಳಿಕೆ, ಜ್ಞಾನ; ಸೀಳುನಾಯಿ–ಕಾಡುನಾಯಿ; ಆಚಾರ–ಒಳ್ಳೆಯ ನಡತೆ; ನಾಮ–ಹೆಸರು; ಗಾವಿಲ–ಹೆಡ್ಡ, ಗಾಂಪ;

೪. ತನು–ಕಾಯ, ದೇಹ, ಶರೀರ; ಮರುಗಿಸು–ದುಃಖಪಡು; ಕಾಮ–ಬಯಕೆ;

ಕ್ರೋಧ–ಸಿಟ್ಟು, ಕೋಪ; ಲೋಭ–ಅತಿಯಾಸೆ; ಮೋಹ–ಮಮತೆ, ಭ್ರಾಂತಿ; ಮದ–ಗರ್ವ, ಸೊಕ್ಕು, ಅಮಲು; ಮತ್ಸರ–ಅಸೂಯೆ, ಹೊಟ್ಟೆಕಿಚ್ಚು; ಛೇದಿಸು–ಬೇರ್ಪಡಿಸು, ತುಂಡರಿಸು; ರೋಷ–ಸಿಟ್ಟು, ಕೋಪ; ಪಾಶ–ಬಂಧನ, ಕಟ್ಟುಪಾಡು; ಸಲಹು–ಕಾಪಾಡು, ರಕ್ಷಿಸು;

## ಟಿಪ್ಪಣಿ

**ಸಮ್ಯಜ್ಞಾನ** : ಸುಜ್ಞಾನ, ಒಳ್ಳೆಯ ತಿಳಿವಳಿಕೆ, ಸದಾಚಾರ, ( ಜೈನಧರ್ಮದಲ್ಲಿ ರತ್ನತ್ರಯಗಳೆಂದು ಕರೆಯುವ ಸಮ್ಯಜ್ಞಾನ, ಸಮ್ಯಕ್‌ದರ್ಶನ ಹಾಗೂ ಸಮ್ಯಕ್ ಚಾರಿತ್ರಗಳಲ್ಲಿ ಒಂದು.)

**ಜಂಗಮ** : ವೀರಶೈವ ಧರ್ಮದ ಅಷ್ಟಾವರಣಗಳಲ್ಲಿ ಒಂದು. ಗುರು ಮತ್ತು ಲಿಂಗ ಈ ಎರಡರ ಅನುಭಾವ ಶಿವ ಸ್ವರೂಪಿಯೇ ಜಂಗಮ.

**ಪ್ರಸಾದ** : ವೀರಶೈವ ಧರ್ಮದ ಅಷ್ಟಾವರಣಗಳಲ್ಲಿ ಒಂದು. ಪೃಥ್ವಿ ತತ್ವದ ಶುದ್ಧಿಯನ್ನುಂಟು ಮಾಡುವುದೇ ಪ್ರಸಾದ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧.ಕಲಿಯುಗದಲ್ಲಿ ಗುರುವು ಶಿಷ್ಯನಿಗೆ ಹೇಗೆ ಬುದ್ಧಿಯನ್ನು ಹೇಳಬೇಕಿದೆ?

೨.ಕಾಯಕದಲಿ ನಿರತನಾದವನು ಯಾವುದನ್ನು ಮರೆಯಬೇಕು?

೩.ಆಯ್ದಕ್ಕಿ ಮಾರಯ್ಯನ ಪ್ರಕಾರ ಕೈಲಾಸ ಯಾವುದು?

೪.ಕಾಗೆಯು ಏನಾಗಲು ಸಾಧ್ಯವಿಲ್ಲ?

೫.ಯಾರ ಮುಖವನ್ನು ನೋಡಲಾಗದು?

೬.ಶರಣರು ಕೆಡಿಸುವ ನಿದ್ದೆಯನ್ನು ಹೇಗೆ ಗೆದ್ದಿದ್ದಾರೆ?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಶ್ರೀಗುರುವು ಶಿಷ್ಯರಿಗೆ ಬುದ್ಧಿ ಕಲಿಸುವುದು ಕಾಲಕಟ್ಟಳೆಗೆ ಹೇಗೆ ಒಳಪಟ್ಟಿದೆ? ವಿವರಿಸಿ.

೨. ಆಯ್ದಕ್ಕಿ ಮಾರಯ್ಯನು ಕಾಯಕದ ಮಹತ್ವವನ್ನು ಹೇಗೆ ನಿರೂಪಿಸಿದ್ದಾನೆ?

೩. ಅರಿವು, ಆಚಾರ, ಸಮ್ಯಜ್ಞಾನದ ಬಗ್ಗೆ ಅಮುಗೆರಾಯಮ್ಮನ ಅನಿಸಿಕೆ ಏನು?

೪. ಬುದ್ಧಿ ಹೀನರು ಹೇಗೆ ವಿದ್ಯೆಯನ್ನು ಸಂಪಾದಿಸುತ್ತಾರೆ?

೫. ಶಿವಶರಣರು ಜಗವನ್ನೇ ಗೆದ್ದಿಹ ವಿಚಾರದಲ್ಲಿ ಲಿಂಗಮ್ಮನ ಅನಿಸಿಕೆಯೇನು?

**ಇ. ಕೊಟ್ಟಿರುವ ಪ್ರಶ್ನೆಗೆ ಎಂಟು-ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ವಚನಾಮೃತದಲ್ಲಿ ವ್ಯಕ್ತವಾಗಿರುವ 'ಕಾಯಕ ತತ್ವದ' ಮಹತ್ವವನ್ನು ವಿವರಿಸಿ.

**ಈ. ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆ"

೨. "ನಾಮವನೊತ್ತುಕೊಂಡು ತಿರುಗುವ ಗಾವಿಲರ ಮುಖವ ನೋಡಲಾಗದು"

೩. "ಜಂಗಮ ಮುಂದೆ ನಿಂದಿದ್ದಡೂ ಹಂಗು ಹರಿಯಬೇಕು"

೪. " ಕಾಯಕವನೆ ಪ್ರಸಾದ ಕಾಯಕ ಮಾಡಿ ಸಲಹಿದರು "

**ಉ. ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಸರಿಯಾದ ಉತ್ತರ ಪದವನ್ನು ಆರಿಸಿ ಬರೆಯಿರಿ.**

೧. ತ್ರೇತಾಯುಗದಲ್ಲಿ ಶ್ರೀಗುರುವು ಶಿಷ್ಯನಿಗೆ ಬುದ್ಧಿಯನ್ನು ಹೀಗೆ ಕಲಿಸುತ್ತಿದ್ದರು :

ಅ) ಬಡಿದು ಆ) ಬೈದು ಇ) ವಂದಿಸಿ ಈ) ಝಂಕಿಸಿ

೨. ಆಯ್ದಕ್ಕಿ ಮಾರಯ್ಯನ ಅಂಕಿತ ನಾಮ :

ಅ) ಗುಹೇಶ್ವರ ಆ) ಅಮುಗೇಶ್ವರ ಇ) ಅಮರೇಶ್ವರಲಿಂಗ ಈ) ಅಪ್ಪಣ್ಣಪ್ರಿಯ.

೩. 'ಕೋಗಿಲೆ' ಪದದ ತದ್ಭವ ರೂಪ :

ಅ) ಕೋಕಿಲ ಆ) ಸಂಕಿಲಾ ಇ) ಕೋಕಿಲೆ ಈ) ಕೊಕಿಲಾ

೪. 'ಜಂಗಮ' ಪದದ ವಿರುದ್ಧಾರ್ಥಕ ಪದ :

ಅ) ವಿರಕ್ತಿ ಆ) ವಿದ್ವಾಂಸ ಇ) ಗುರು ಈ) ಸ್ಥಾವರ

೫. "ತನುವ ಕರಗಿಸಿ ಕಾಯ ಮರುಗಿಸಿ ವಿದ್ಯೆಯನ್ನು ಕಲಿತಿಹೆ " ಎನ್ನುವವರು :

ಅ) ಶಿವಶರಣರು ಆ) ಬುದ್ಧಿಹೀನರು ಇ) ಸಾಮಾನ್ಯರು ಈ) ವಿದ್ಯಾರ್ಥಿಗಳು

**ಊ. ಗುಂಪಿಗೆ ಸೇರದ ಪದಗಳನ್ನು ಆಯ್ದು ಬರೆಯಿರಿ.**

೧. ಆನೆ ಗಜ ಹಯ ಕರಿ

೨. ಬಸವಣ್ಣ ಕನಕದಾಸರು ಅಲ್ಲಮಪ್ರಭು ಅಮುಗೆ ರಾಯಮ್ಮ

೩. ಕಾಮ ಕ್ರೋಧ ಧನ ಲೋಭ

೪. ದ್ವಾಪರಯುಗ ಕೃತಯುಗ ಸುವರ್ಣಯುಗ ಕಲಿಯುಗ

೫. ತನು ದೇಹ ಮಾಯ ಕಾಯ

## ಚಟುವಟಿಕೆ

**ಅ. ಕೊಟ್ಟಿರುವ ಪದ್ಯಭಾಗವನ್ನು ಕಂಠಪಾಠ ಮಾಡಿ.**

೧. ಆಯ್ದಕ್ಕಿಮಾರಯ್ಯನವರ ವಚನಗಳ ಮೊದಲ ನಾಲ್ಕು ಸಾಲುಗಳು.

(ಕಾಯಕದಲ್ಲಿ ------------ ಹರಿಯಬೇಕು.)

೨. ಅಮುಗೆ ರಾಯಮ್ಮನವರ ವಚನಗಳ ಮೊದಲ ನಾಲ್ಕು ಸಾಲುಗಳು.

(ಕಾಗೆಯಮರಿ ---------- ಸಮ್ಯಜ್ಞಾನವನರಿಯದೆ)

## ಪೂರಕ ಓದು

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ** ಪ್ರಕಟಿಸಿರುವ ಸಮಗ್ರ ವಚನ ಸಂಪುಟದಲ್ಲಿರುವ ಕೆಲವು ಜನಪ್ರಿಯ ವಚನಗಳನ್ನು ಸಂಗ್ರಹಿಸಿ



# ೬. ಸೋಮೇಶ್ವರಶತಕ




**ಪುಲಿಗೆರೆ ಸೋಮನಾಥ–**

**ಪ್ರವೇಶ :** ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶತಕ ಸಾಹಿತ್ಯ ವಿಶೇಷತೆಯಿಂದ ಕೂಡಿದ್ದು. ಈ ಪ್ರಕಾರದಲ್ಲಿ ಕೃತಿ ರಚನೆ ಮಾಡಿರುವ ಕವಿ ಸೋಮನಾಥ. ಈತನ ಕೃತಿ ಸೋಮೇಶ್ವರ ಶತಕವೆಂದೇ ಪ್ರಸಿದ್ಧಿಪಡೆದಿದೆ. ಸೋಮೇಶ್ವರ ಶತಕವು ಕನ್ನಡ ನಾಡಿನ ಜನಪದ ಕಾವ್ಯವೆಂಬಂತೆ ಜನಮನದಲ್ಲಿ ನೆಲೆಸಿರುವ ಕಾವ್ಯ. ನೀತಿ ಬೋಧಕವಾದ ಈ ಕಾವ್ಯವು ಇಂದಿಗೂ ಅನುಕರಣೀಯವಾದುದ್ದಾಗಿದೆ. "ಮಾತೃದೇವೋಭವ ಪಿತೃದೇವೋಭವ ಆಚಾರ್ಯ ದೇವೋಭವ" ಎಂಬುದು ನಮ್ಮೆಲ್ಲ ಧರ್ಮಗಳ ಮೂಲ ಮಂತ್ರ.

ಇವರೆಲ್ಲರೂ ತಮ್ಮ ತಮ್ಮ ಕರ್ತವ್ಯಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಜವಾಬ್ದಾರಿಗಳನ್ನು ಪ್ರಾಮಾಣಿಕವಾಗಿ ನಿಷ್ಠೆಯಿಂದ ಮಾಡಲೇಬೇಕು. ರಾಜ್ಯವಾಳುವ ರಾಜನಾಗಲಿ, ಮಂತ್ರಿಯಾಗಲಿ, ರಕ್ಷಕರಾದ ಭಟರಾಗಲಿ ಇದರಿಂದ ಹೊರತಾಗುವುದಿಲ್ಲ. ಈ ಕರ್ತವ್ಯ ಪ್ರಜ್ಞೆಯೇ ದೈವತ್ವದ ಸ್ಥಾನ–ಮಾನ ಪಡೆಯಲು ಸಾಧ್ಯವಾಗುತ್ತದೆ. ದೈವದ ಅನುಗ್ರಹವು ಸ್ವಾಭಾವಿಕವಾಗಿ ಏನೆಲ್ಲ ಪರಿವರ್ತನೆಗೆ ಕಾರಣವಾಗುತ್ತದೆ. ಎಂಬುದನ್ನು ಮನೋಜ್ಞವಾಗಿ ಈ ಶತಕದಲ್ಲಿ ವಿವರಿಸಲಾಗಿರುವುದರಿಂದ ಇಂದಿಗೂ ಪ್ರಸ್ತುತವಾಗಿದೆ.



೧

ಹಿತವಂ ತೋರುವನಾತ್ಮಬಂಧು ಪೊರೆವಾತಂ ತಂದೆ ಸದ್ಧರ್ಮದಾ ।
ಸತಿಯೇ ಸರ್ವಕೆ ಸಾಧನಂ ಕಲಿಸಿದಾತಂ ವರ್ಣಮಾತ್ರಂ ಗುರು ॥
ಶ್ರುತಿಮಾರ್ಗಂ ಬಿಡದಾತ ಸುವ್ರತಿ ಮಹಾ ಸದ್ವಿದ್ಯೆಯೇ ಪುಣ್ಯದಂ ।
ಸುತನೇ ಸದ್ಗತಿದಾತನೈ ಹರಹರಾ ಶ್ರೀಚೆನ್ನಸೋಮೇಶ್ವರಾ ॥

೨

ಪ್ರಜೆಯಂ ಪಾಲಿಸಬಲ್ಲೊಡಾತನರಸಂ ಕೈಯಾಸೆಯಂ ಮಾಡದಂ ।
ನಿಜ ಮಂತ್ರೀಶ್ವರ ತಂದೆ ತಾಯ ಸಲಹಲ್ ಬಲ್ಲಾತನೇ ಧಾರ್ಮಿಕಂ ॥
ಭಜಕಂ ದೈವದ ಭಕ್ತಿಯುಳ್ಳೊಡೆ ಭಟಂ ನಿರ್ಭೀತ ತಾನಾದವಂ ।
ದ್ವಿಜನಾಚಾರತೆಯುಳ್ಳವಂ ಹರಹರಾ ಶ್ರೀಚೆನ್ನಸೋಮೇಶ್ವರಾ॥

೩

ಅತಿ ಗಂಭೀರನುದಾರ ಧೀರನು ಮಹಾ ಸಂಪನ್ನ ಸತ್ಯಾತ್ಮನೂ ।
ರ್ಜಿತ ನಾನಾಲಿಪಿಭಾಷೆಯೊಳ್ ಪರಿಚಿತಂ ಲಂಚಕ್ಕೆ ಕೈನೀಡದಂ ॥
ವ್ರತ ಸದ್ಧರ್ಮ ವಿಚಾರಶಾಲಿ ಚತುರೋಪಾಯಂಗಳಂ ಬಲ್ಲವಂ ।
ಪತಿಕಾರ್ಯಂ ವರ ಮಂತ್ರಿಯೈ ಹರಹರಾ ಶ್ರೀಚೆನ್ನಸೋಮೇಶ್ವರಾ ॥

೪

ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋಧಬೀಜಂ ಕೆಲಂ ।
ಸಿಡಿದುಂ ಪೆರ್ಮರನಾಗದೇ ಎಳಗರುಂ ಎತ್ತಾಗದೇ ಲೋಕದೊಳ್ ॥
ಮಿಡಿ ಪಣ್ಣಾಗದೆ ದೈವನೊಲ್ಮೆಯಿರಲಾ ಕಾಲಾನುಕಾಲಕ್ಕೆ ತಾಂ ।
ಬಡವಂ ಬಲ್ಲಿದನಾಗನೇ ಹರಹರಾ ಶ್ರೀಚೆನ್ನಸೋಮೇಶ್ವರಾ ॥

## ಕೃತಿಕಾರರ ಪರಿಚಯ

**ಪುಲಿಗೆರೆ ಸೋಮನಾಥ** ಕ್ರಿ.ಶ. ಸುಮಾರು ೧೫೫೦ ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ **ಪುಲಿಗೆರೆ**ಯವನು. ಪುಲಿಗೆರೆ ಸೋಮನಾಥನೆಂದೇ ಪ್ರಸಿದ್ಧಿ. ಕನ್ನಡ, ಸಂಸ್ಕೃತ ಭಾಷಾಪಂಡಿತನಾದ ಈತನ ಅಂಕಿತ **ಹರಹರಾ ಶ್ರೀ ಚನ್ನಸೋಮೇಶ್ವರಾ. ಕನ್ನಡ ರತ್ನಕರಂಡಕ** ಕಾವ್ಯವನ್ನು ಚಂಪುವಿನಲ್ಲಿಯೂ ಸೋಮೇಶ್ವರ ಶತಕವನ್ನು ವೃತ್ತ ಛಂದಸ್ಸಿನಲ್ಲಿಯೂ ರಚಿಸಿದ್ದಾನೆ.

ಪ್ರಕೃತ ಚೌಪದಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಸಂಪಾದಿಸಿರುವ **ಸೋಮೇಶ್ವರ ಶತಕ** ಕೃತಿಯಿಂದ ಆಯ್ಕೆಮಾಡಿ ಕೊಳ್ಳಲಾಗಿದೆ.

### ಆಶಯ ಭಾವ

ಸಮಾಜದ ಅವಿಭಾಜ್ಯ ಅಂಗವಾದ ತಂದೆ, ತಾಯಿ, ಮಗ, ಪತ್ನಿ, ಗುರುಗಳ ಜವಾಬ್ದಾರಿಗಳನ್ನು, ದ್ವಿಜ, ರಾಜ, ಮಂತ್ರಿ, ಭಟ ಮೊದಲಾದವರ ಕರ್ತವ್ಯಗಳನ್ನು ಈ ನೀತಿ ಶತಕದಲ್ಲಿ ಮಾರ್ಮಿಕವಾಗಿ ಹೇಳಲಾಗಿದೆ. ನಿಜವಾದ ಮಂತ್ರಿಗೆ ಇರಬೇಕಾದ ಲಕ್ಷಣ, ದೇವರ ಅನುಗ್ರದಿಂದ ಕಾಲಾನುಕ್ರಮದಲ್ಲಿ ಸ್ವಾಭಾವಿಕವಾಗಿ ಆಗುವ ಬದಲಾವಣೆಗಳ ಬಗ್ಗೆಯೂ ವಿವರಿಸಲಾಗಿದೆ. ಈ ಮೂಲಕ ಪ್ರತಿಯೊಬ್ಬರೂ ತಮ್ಮ ತಮ್ಮ ಜವಾಬ್ದಾರಿಗಳನ್ನರಿತಾಗ ಸುಖೀಸಮಾಜದ ನಿರ್ಮಾಣವಾಗುತ್ತದೆಂಬುದು ಈ ನೀತಿ ಶತಕದ ಆಶಯ.



* * *

## ಪದಗಳ ಅರ್ಥ

ಆತ್ಮ–ತನ್ನ; ಉಡುರಾಜ–ನಕ್ಷತ್ರಾಧಿಪತಿ, ಚಂದ್ರ; ಊರ್ಜಿತ–ರೂಢಿಯಲ್ಲಿರುವ; ಒಲ್ಮೆ–ಪ್ರೀತಿ; ಕೆಲ – ಕೆಲವು; ಕೈಯಾಸೆ–ಲಂಚ, ಆಮಿಷ; ಚತುರೋಪಾಯ – ಸಾಮ, ದಾನ, ದ್ವಿಜ–ಬ್ರಾಹ್ಮಣ; ನ್ಯಗ್ರೋಧ–ಆಲದಮರ; ಪತಿಕಾರ್ಯ–ಸ್ವಾಮಿಕಾರ್ಯ, (ಆಸಕ್ತನಾದವನು); ಪಾಲಿಸು–ಕಾಪಾಡು, ಸಲಹು; ಪೆರ್ಚು–ಹೆಚ್ಚು, ವೃದ್ಧಿಸು; ಪೆರ್ಮರ–ದೊಡ್ಡಮರ; ಪೊರೆ–ಕಾಪಾಡು; ಬಲ್ಲಿದ–ಬಲಿಷ್ಠ, ಹಣವಂತ; ಭಜಕ–ಪೂಜಿಸುವವನು; ಭಟ–ಸೈನಿಕ; ಮಿಡಿ–ಹೀಚು; ವರ್ಣ–ಅಕ್ಷರ; ವ್ರತಿ–ನಿಯಮವುಳ್ಳವನು; ಮುನಿ–ತಪಸ್ವಿ; ಶ್ರುತಿ–ವೇದ; ಸಂಪನ್ನ–ಗುಣಶಾಲಿ; ಸಾಧನ–ಸಹಾಯ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ನಿಜವಾದ ಬಂಧು ಯಾರು?

೨. ಧಾರ್ಮಿಕನೆಂದು ಯಾರನ್ನು ಕರೆಯಲಾಗಿದೆ?

೩. ರಾಜನಾದವನ ಕರ್ತವ್ಯವೇನು?

೪. ಆಲದ ಮರದ ಬೀಜ ಸಿಡಿದು ಭೂಮಿಗೆ ಬಿದ್ದು ಏನಾಗುತ್ತದೆ?

೫. ಪುಲಿಗೆರೆ ಸೋಮನಾಥನ ಅಂಕಿತನಾಮವೇನು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಸುವ್ರತಿ ಹಾಗೂ ಸುತನ ಬಗೆಗೆ ಕವಿ ಏನು ಹೇಳಿದ್ದಾನೆ?

೨. ಭಟ ಮತ್ತು ದ್ವಿಜರ ಲಕ್ಷಣಗಳೇನು?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಐದು-ಆರು ವಾಕ್ಯಗಳಲ್ಲಿ ಉತ್ತರಿಸಿ.**

೧. ಶ್ರೇಷ್ಠ ಮಂತ್ರಿಯಲ್ಲಿರಬೇಕಾದ ಲಕ್ಷಣಗಳೇನು?

೨. ಬಡವ ಬಲ್ಲಿದನಾಗುವನು ಎಂಬುದಕ್ಕೆ ಕವಿ ನೀಡಿರುವ ನಿದರ್ಶನಗಳಾವುವು?

**ಈ. ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ಸದ್ಧರ್ಮದಾ ಸತಿಯೇ ಸರ್ವಕೆ ಸಾಧನಂ"

೨. "ಅತಿ ಗಂಭೀರನುದಾರ ಧೀರನು"

೩. "ಉಡುರಾಜ ಕಳೆಗುಂದಿ ಪೆರ್ಚದಿಹನೆ"

**ಉ. ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದ ಬರೆಯಿರಿ.**

| | | | | | | |
|---|---|---|---|---|---|---|
| ೧. ಮಿಡಿ | : | ಪಣ್ಣಾಗದೇ | : : | ಎಳಗರು | : | ___________ |
| ೨. ನ್ಯಗ್ರೋಧ | : | ಆಲದ ಮರ | : : | ಉಡುರಾಜ | : | ___________ |
| ೩. ಭಕ್ತಿಯುಳ್ಳ | : | ಆಗಮಸಂದಿ | : : | ಕಳೆಗುಂದು | : | ___________ |
| ೪. ಧರ್ಮ | : | ಅಧರ್ಮ | : : | ಬಡವ | : | ___________ |
| ೫. ಕಾರ್ಯ | : | ಕಜ್ಜ | : : | ಭಕ್ತಿ | : | ___________ |



## ಸೈದ್ಧಾಂತಿಕ ಭಾಷಾಭ್ಯಾಸ

**ಅಲಂಕಾರ : ಪರಿಚಯಾತ್ಮಕ ವಿವರ**

ಮನುಷ್ಯ ತನ್ನ ದೇಹದ ಸೌಂದರ್ಯವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ವೈವಿಧ್ಯಪೂರ್ಣ ಬಟ್ಟೆ, ಆಭರಣ ಇತ್ಯಾದಿ ಸೌಂದರ್ಯ ಸಾಧನಗಳನ್ನು ಬಳಸುತ್ತಾನೆ. ಹೀಗೆ ಅಲಂಕಾರ ಮಾಡಿಕೊಂಡ ವ್ಯಕ್ತಿ ಇತರರಿಂದ ಆಕರ್ಷಿಸಲ್ಪಡುತ್ತಾನೆ. ದೇಹದ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಅಲಂಕಾರ ಮಾಡಿಕೊಂಡಂತೆ ಮನುಷ್ಯ ತನ್ನ ಮಾತೂ ಇತರರಿಗೆ ಇಂಪಾಗಿ ಕೇಳುವಂತೆ ಮಾಡುವ ಸಲುವಾಗಿ ಚಮತ್ಕಾರದಿಂದ ಮಾತನಾಡುತ್ತಾನೆ. ಹಾಗಾಗಿ – **ಕಾವ್ಯದ ಸೌಂದರ್ಯವನ್ನು ಹೆಚ್ಚಿಸುವ ಚಮತ್ಕಾರಿಕ ಮಾತುಗಳೇ ಅಲಂಕಾರ.** ಅಲಂಕಾರದಲ್ಲಿ **ಶಬ್ದಾಲಂಕಾರ** ಮತ್ತು **ಅರ್ಥಾಲಂಕಾರ** ಎಂಬ ಎರಡು ವಿಧಗಳಿವೆ.

**ಶಬ್ದಾಲಂಕಾರ : ಶಬ್ದಗಳ ಜೋಡಣೆಯ ಚಮತ್ಕಾರದಿಂದ ಕಾವ್ಯದ ಸೌಂದರ್ಯ ಹೆಚ್ಚಿದರೆ ಅದನ್ನು ಶಬ್ದಾಲಂಕಾರ ಎನ್ನುತ್ತಾರೆ.** ಇದರಲ್ಲಿ **ಅನುಪ್ರಾಸ, ಯಮಕ** ಮತ್ತು **ಚಿತ್ರ ಕವಿತ್ವ** ಎಂದು ಪ್ರಧಾನವಾಗಿ **ಮೂರು** ವಿಧಗಳಿವೆ. **ಅನುಪ್ರಾಸ**ವನ್ನು **ವೃತ್ಯನುಪ್ರಾಸ** ಮತ್ತು **ಛೇಕಾನುಪ್ರಾಸ** ಎಂದು ವಿಭಾಗಿಸಲಾಗಿದೆ.

**ಅರ್ಥಾಲಂಕಾರ : ಕಾವ್ಯದಲ್ಲಿ ಬಳಸಲಾದ ಪದಗಳ ಅರ್ಥ ಚಮತ್ಕಾರದಿಂದ ಕಾವ್ಯದ ಸೌಂದರ್ಯ ಹೆಚ್ಚಾದರೆ ಅದನ್ನು ಅರ್ಥಾಲಂಕಾರ ಎನ್ನುತ್ತಾರೆ.** ಇದರಲ್ಲಿ ನೂರಕ್ಕೂ ಮಿಕ್ಕಿದ ಅಲಂಕಾರಗಳಿವೆ. ಇವುಗಳಲ್ಲಿ ಬರುವ **ಉಪಮೇಯ ಉಪಮಾನ**ಗಳ ಸಹಾಯದಿಂದ ಅದು ಯಾವ ಅಲಂಕಾರ ಎಂದು ನಿರ್ಧರಿಸಲಾಗುವುದು.

**ಉಪಮೇಯ :** ಉಪಮೇಯವನ್ನು **ವರ್ಣ್ಯ** ಎಂತಲೂ ಕರೆಯುವರು. **ಆಲಂಕಾರಿಕ ವಾಕ್ಯದಲ್ಲಿ ಯಾವ ವಸ್ತುವನ್ನು ಕುರಿತು ವರ್ಣಿಸಲಾಗುತ್ತದೆಯೋ. ಅದೇ ವರ್ಣ್ಯ** ಅಥವಾ **ಉಪಮೇಯ.**

**ಉಪಮಾನ :** ಉಪಮಾನವನ್ನು **ಅವರ್ಣ್ಯ** ಎಂತಲೂ ಕರೆಯುವರು **ಯಾವ ವಸ್ತುವನ್ನು ಆಧರಿಸಿ ಅಥವಾ ಮಾನವಾಗಿಟ್ಟುಕೊಂಡು ವರ್ಣಿಸಲಾಗುತ್ತದೆಯೋ ಅದೇ ಅವರ್ಣ್ಯ** ಅಥವಾ **ಉಪಮಾನ.**

**ಉಪಮಾಲಂಕಾರ : ಉಪಮಾ** ಎಂದರೆ **ಹೋಲಿಕೆ** ಎಂದರ್ಥ. ಯಾವ ಅಲಂಕಾರದಲ್ಲಿ ಉಪಮೇಯ ಉಪಮಾನಗಳೊಳಗೆ ಉಪಮಾ (ಹೋಲಿಕೆ) ಇರುತ್ತದೆಯೋ ಆ ಅಲಂಕಾರವೇ **ಉಪಮಾಲಂಕಾರ.**

**ಉದಾ : ಮನೋರಮೆಯ ಹಣೆ ಬಾಲಚಂದ್ರನಂತೆ ಆಕರ್ಷಣೀಯವಾಗಿತ್ತು**. ಇಲ್ಲಿ ಮನೋರಮೆಯ ಹಣೆ ಅರ್ಧಚಂದ್ರಾಕೃತಿಯಲ್ಲಿದೆ ಎಂದು ಹೇಳುವ ಬದಲಿಗೆ ಬಾಲಚಂದ್ರನಂತೆ ಆಕರ್ಷಣೀಯವಾಗಿತ್ತು, ಎಂದು ಹೇಳಲಾಗಿದೆ.

- ಮನೋರಮೆಯ ಹಣೆಯನ್ನು ವರ್ಣಿಸುತ್ತಿರುವುದರಿಂದ **ಮನೋರಮೆಯ ಹಣೆ** ಎಂಬುದು **ಉಪಮೇಯವಾಯ್ತು.**
- ಬಾಲಚಂದ್ರನನ್ನು ಆಧಾರವಾಗಿಟ್ಟುಕೊಂಡು ಮನೋರಮೆಯ ಹಣೆಯನ್ನು ವರ್ಣಿಸುತ್ತಿರುವುದರಿಂದ **ಬಾಲಚಂದ್ರ** ಎಂಬುದು **ಉಪಮಾನವಾಯ್ತು.**
- ಉಪಮೇಯಕ್ಕೂ ಉಪಮಾನಕ್ಕೂ ಹೋಲಿಕೆಯನ್ನು ಹೇಳುವಂತಹ **ಅಂತೆ, ವೋಲ್, ವೊಲ್** ಮುಂತಾದ ಪದಗಳೇ **ವಾಚಕ ಪದಗಳು**. ಇಲ್ಲಿ **ಅಂತೆ,** ಎಂಬುದು **ವಾಚಕ** ಪದ.
- ಉಪಮೇಯಕ್ಕೂ ಉಪಮಾನಕ್ಕೂ ಸಮಾನವಾಗಿ ಹೊಂದಿಕೆಯಾಗುವ ಕ್ರಿಯಾಪದವೇ **ಸಮಾನಧರ್ಮ**. ಇಲ್ಲಿ **ಆಕರ್ಷಣೀಯವಾಗಿತ್ತು** ಎಂಬುದು **ಸಮಾನಧರ್ಮ**.
- ಉಪಮೇಯಕ್ಕೂ ಉಪಮಾನಕ್ಕೂ ಹೋಲಿಕೆಯನ್ನು ಹೇಳಿರುವುದರಿಂದ ಇದು **ಉಪಮಾಲಂಕಾರ.**



**ಉಪಮಾಲಂಕಾರದಲ್ಲಿ ಪೂರ್ಣೋಪಮಾಲಂಕಾರ, ಲುಪ್ತೋಪಮಾಲಂಕಾರ** ಎಂಬ ಎರಡು ವಿಧಗಳಿವೆ.

**ಪೂರ್ಣೋಪಮಾಲಂಕಾರ** : ಯಾವ ಉಪಮಾಲಂಕಾರದಲ್ಲಿ **ಉಪಮೇಯ, ಉಪಮಾನ, ವಾಚಕ ಪದ, ಸಮಾನಧರ್ಮ** ಎಂಬ ನಾಲ್ಕು ಅಂಶಗಳು ಇರುತ್ತವೆಯೋ ಅದೇ **ಪೂರ್ಣೋಪಮಾಲಂಕಾರ.**

**ಉದಾ.: ಬಿರುಗಾಳಿಗೆ ತುತ್ತಾದ ಮರಗಿಡಗಳು ಬೀಳುವಂತೆ ಭರತಕುಲದ ನೂರ್ವೆವರು ಬಾಲಕರು ಬಿದ್ದರು.**

**ಉಪಮೇಯ** : ಭರತಕುಲದ ನೂರ್ವೆವರು ಬಾಲಕರು
**ಉಪಮಾನ** : ಬಿರುಗಾಳಿಗೆ ತುತ್ತಾದ ಮರಗಿಡಗಳು
**ವಾಚಕಪದ** : ಅಂತೆ
**ಸಮಾನಧರ್ಮ** : ಬೀಳುವುದು

**ಅಲಂಕಾರ** : ಉಪಮಾಲಂಕಾರ (ಪೂರ್ಣೋಪಮಾಲಂಕಾರ)

**ಸಮನ್ವಯ** : **ಉಪಮೇಯ**ವಾದ ಭರತಕುಲದ ನೂರ್ವರು ಬಾಲಕರು ಬಿದ್ದಿರುವುದನ್ನು **ಉಪಮಾನ**ವಾದ ಬಿರುಗಾಳಿಗೆ ತುತ್ತಾದ ಮರಗಿಡಗಳಿಗೆ ಹೋಲಿಸಿರುವುದರಿಂದ ಇದು **ಉಪಮಾಲಂಕಾರ.**

ಈ ಅಲಂಕಾರದಲ್ಲಿ **ಉಪಮೇಯ, ಉಪಮಾನ, ವಾಚಕಪದ, ಸಮಾನಧರ್ಮ** ಎಂಬ ನಾಲ್ಕು ಅಂಶಗಳಿರುವುದರಿಂದ ಇದು **ಪೂರ್ಣೋಪಮಾಲಂಕಾರವೂ** ಹೌದು.

**ಲುಪ್ತೋಪಮಾಲಂಕಾರ:** ಇದು ಉಪಮಾಲಂಕಾರದ ಇನ್ನೊಂದು ಪ್ರಭೇದ. ಪೂರ್ಣೋಪ ಮಾಲಂಕಾರವಾಗಬೇಕಾದರೆ ಇರಬೇಕಾದ ನಾಲ್ಕು ಅಂಶಗಳಲ್ಲಿ ಯಾವುದಾದರೂ ಅಂಶ ಇಲ್ಲವಾದರೆ ಅದು **ಲುಪ್ತೋಪಮಾಲಂಕಾರ**ವಾಗುತ್ತದೆ. ಯಾವ ಅಂಶ ಲುಪ್ತವಾಗಿದೆಯೋ ಅದೇ ಹೆಸರಿನಿಂದ ಆ ಅಲಂಕಾರವನ್ನು ಕರೆಯಲಾಗುತ್ತದೆ. ಅಂದರೆ ಉಪಮೇಯ ಇಲ್ಲವಾದರೆ ಅದು **ಉಪಮೇಯ ಲುಪ್ತೋಮಾಲಂಕಾರ.** ಹಾಗೆಯೇ **ಉಪಮಾನಲುಪ್ತೋಪಮಾಲಂಕಾರ, ವಾಚಕಲುಪ್ತೋಪಮಾಲಂಕಾರ, ಧರ್ಮಲುಪ್ತೋಪಮಾಲಂಕಾರ, ವಾಚಕಧರ್ಮಲುಪ್ತೋಪಮಾಲಂಕಾರ** ಇತ್ಯಾದಿ **ಲುಪ್ತೋಪಮಾಲಂಕಾರ**ಗಳಿವೆ.



## ಅಭ್ಯಾಸ ಚಟುವಟಿಕೆ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಅಲಂಕಾರ ಎಂದರೇನು?

೨. ಉಪಮಾಲಂಕಾರ ಎಂದರೇನು? ನಿದರ್ಶನ ಸಹಿತ ವಿವರಿಸಿ.

೩. ಪೂರ್ಣೋಪಮಾಲಂಕಾರ ಎಂದರೇನು? ವಿವರಣೆ ನೀಡಿ.

## ಪ್ರಾಯೋಗಿಕ ಭಾಷಾಭ್ಯಾಸ

**ಅ. ಕೊಟ್ಟಿರುವ ವಾಕ್ಯದಲ್ಲಿರುವ ಅಲಂಕಾರವನ್ನು ಹೆಸರಿಸಿ ಸಮನ್ವಯ ಮಾಡಿ.**

೧. ಮನೋರಮೆಯ ಮುಖ ಕಮಲದಂತೆ ಅರಳಿತು.

೨. ಗೀಜಗನ ಗೂಡುಗಳು ತೂಗುವ ತೊಟ್ಟಿಲಿನಂತೆ ತೂಗುತ್ತಿದ್ದವು.

**ಆ. 'ಸೋಮೇಶ್ವರ ಶತಕ' ಪದ್ಯದಲ್ಲಿ ಬಂದಿರುವ ಪ್ರಾಸ ಯಾವುದು?**

## ಪಠ್ಯಾಧಾರಿತ ಚಟುವಟಿಕೆ

**ಕೊಟ್ಟಿರುವ ಪದ್ಯಭಾಗವನ್ನು ಕಂಠಪಾಠ ಮಾಡಿ.**

ಪ್ರಜೆಯಂ ಪಾಲಿಸ ---------------

-------------------------

-------------------------

------------- ಶ್ರೀ ಚೆನ್ನ ಸೋಮೇಶ್ವರ

## ಪೂರಕ ಓದು

✦ **ಕನ್ನಡ ಮತ್ತು ಸಂಸ್ಕೃತಿ ಇಲಾಖೆ** ಪ್ರಕಟಿಸಿರುವ ಸಮಗ್ರ ವಚನ ಸಂಪುಟದಲ್ಲಿರುವ ಕೆಲವು ಜನಪ್ರಿಯ ವಚನಗಳನ್ನು ಸಂಗ್ರಹಿಸಿ.



✦ ✦ ✦ ✦ ✦

# ೭. ಜೀವನ ದರ್ಶನ




## ಶ್ರೀಪಾದರಾಜರು, ಗೋಪಾಲದಾಸರು, ವಿಜಯದಾಸರು

**ಪ್ರವೇಶ :** ಕನ್ನಡ ಸಾಹಿತ್ಯ ಪರಂಪರೆಯಲ್ಲಿ ೧೫–೧೬ನೆಯ ಶತಮಾನದಲ್ಲಿ ಜ್ಞಾನ ಮತ್ತು ಭಕ್ತಿಯ ಮೂಲಕ ಮುಕ್ತಿಯನ್ನು ಕಾಣಬಯಸಿ, ವಿಷ್ಣುವನ್ನು ಆರಾಧ್ಯ ದೈವನನ್ನಾಗಿಸಿಕೊಂಡು, ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಸುಧಾರಣೆಗಾಗಿ ಶ್ರಮಿಸಿದ ಸಾಹಿತ್ಯ ಪ್ರಕಾರವೇ ದಾಸ ಸಾಹಿತ್ಯ. ದಾಸ ಸಾಹಿತ್ಯವನ್ನು ದಾಸವಾಙ್ಮಯ, ಹರಿದಾಸ ಸಾಹಿತ್ಯವೆಂತಲೂ ಕರೆಯುತ್ತಾರೆ. 'ದಾಸ' ಎಂದರೆ 'ಸೇವಕ' ಎಂದರ್ಥ. ಶ್ರೀಹರಿಯಲ್ಲಿ ಭಕ್ತಿಯನ್ನಿಟ್ಟು, ಮನಸ್ಸನ್ನು ನಿರ್ಮಲಮಾಡಿಕೊಂಡು, ತ್ಯಾಗ ಜೀವನ ನಡೆಸುತ್ತಾ, ಹರಿನಾಮ ಜಪಿಸುತ್ತಾ ರಚಿಸಿದ ಸಾಹಿತ್ಯ ಇದಾಗಿದೆ.

ಈ ಸಾಹಿತ್ಯ ಪ್ರಕಾರದಲ್ಲಿ ಬರುವ ನರಹರಿತೀರ್ಥರು, ಶ್ರೀಪಾದರಾಜರು, ವ್ಯಾಸರು, ವಿಜಯದಾಸರು, ಕನಕ – ಪುರಂದರದಾಸರು, ರಾಘವೇಂದ್ರತೀರ್ಥರೇ ಮೊದಲಾದವರು. ಭಕ್ತಿ – ಆಧ್ಯಾತ್ಮಿಕ ವಿಷಯಗಳನ್ನು ಸುಂದರ ಕಾವ್ಯವನ್ನಾಗಿಸುವ ಮೂಲಕ ಕೀರ್ತನೆಗಳು, ಉಗಾಭೋಗ, ಸುಳಾದಿ, ಮಂಡಿಗೆ ಮೊದಲಾದ ರಚನೆಗಳನ್ನು ರಚಿಸುವ ಮೂಲಕ ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡಿದ್ದಾರೆ, ಕೆಲವನ್ನು ಪರಿಚಯಾತ್ಮಕವಾಗಿ ನೀಡಲಾಗಿದೆ.



ಭಕ್ತಿ ಬೇಕು ವಿರಕ್ತಿ ಬೇಕು ಸರ್ವ
ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವಗೆ // ಪ //

ಸತಿ ಅನುಕೂಲ ಬೇಕು ಸುತನಲ್ಲಿ ಗುಣಬೇಕು
ಮತಿವಂತನಾಗಬೇಕು ಮತ ಒಂದಾಗಬೇಕು // ೧ //

ಜಪದ ಜಾಣುವೆ ಬೇಕು ತಪದ ನೇಮವೆ ಬೇಕು
ಉಪವಾಸ ವ್ರತ ಬೇಕು ಉಪಶಾಂತವಿರಬೇಕು // ೨ //

ಸುಸಂಗ ಹಿಡಿಯಲೆಬೇಕು ದುಸ್ಸಂಗ ಬಿಡಬೇಕು
ರಂಗವಿಠಲನ್ನ ಬಿಡದೆ ನೆರೆ ನಂಬಿರಬೇಕು // ೩ //

– ಶ್ರೀಪಾದರಾಜರು

* * *

ಈತನೀಗ ನಮ್ಮ ದೇವನು ಪ.
ಪ್ರೀತಿಯಿಂದಲಿ ಸ್ಮರಿಸುವವರ । ಪಾತಕಗಳ ಪರಿಹರಿಪ ಅ.ಪ

ಅಕ್ರೂರನ ಪ್ರೀತನೀತ । ಶಂಖಚಕ್ರ ಧರಿಸಿದಾತ
ನಕ್ರಬಾಧೆಯ ತರಿದು ತನ್ನ । ಭಕ್ತರನ್ನು ಕಾಯಿದಾತ // ೧ //

ಅಜಮಿಳನ ಸಲಹಿದಾತ । ವ್ರಜದಗೋವು ಕಾಯಿದಾತ
ಭಜಿಸುವವರ ಬಿಡನು ಪ್ರೀತ । ತ್ರಿಜಗದೊಳಗೆ ಮೆರವದಾತ // ೨ //

ಸಕಲ ಗುಣ ಪೂರ್ಣನೀತ । ಸಕಲ ದೋಷ ದೂರನೀತ
ಸಕಲಾನಂದ ಪೂರ್ಣನೀತ । ಭಕುತಿ ಮಂತ್ರಕೊಲಿವದಾತ // ೩ //

ಅನಾಥ ಬಾಂಧವನೀತ । ಅನಾದಿ ಕಾಲದವನಾತ
ಅನಾದಿ ಮೊರೆಯ ಕೇಳಿ । ಆ ನಿಮಿಷದೊಳು ಒದಗಿದಾತ // ೪ //

ಕಮಲಮುಖಿಯ ರಮಣನೀತ । ಕಮಲಾಸನಜನಕನೀತ
ಕಮಲಾಕ್ಷ ಗೋಪಾಲವಿಠಲ ಹೃತ್ । ಕಮಲದೊಳು ನಿಲುವದಾತ. // ೫ //

**– ಗೋಪಾಲದಾಸರು**



* * *

ಸದಾ ಎನ್ನ ಹೃದಯದಲ್ಲಿ ವಾಸಮಾಡೋ ಶ್ರೀಹರಿ ಪ.
ನಾದಮೂರ್ತಿ ಮೋದದಿಂದ ನಿನ್ನ ಪಾದ ಭಜಿಸುವೆ ಅ.ಪ

ಜ್ಞಾನವೆಂಬೊ ನವರತ್ನದ ಮಂಟಪದ ಮಧ್ಯದಲ್ಲಿ
ಗಾನಲೋಲನ ಕುಳ್ಳಿರಿಸಿ । ಧ್ಯಾನದಿಂದ ಭಜಿಸುವೆ // ೧ //

ಭಕ್ತಿರಸವೆಂಬ ಮುತ್ತು ಮಾ । ಣಿಕ್ಯದ ಹರಿವಾಣದಿ
ಮುಕ್ತನಾಗಬೇಕುಯೆಂದು ಮುತ್ತಿನಾರತಿ ಎತ್ತುವೆ // ೨ //

ನಿನ್ನ ನಾಮ ಬಿಡುವನಲ್ಲ । ಎನ್ನ ನೀನು ಬಿಡಲು ಸಲ್ಲ
ಘನ ಮಹಿಮ ವಿಜಯವಿಠಲ ಕೇಳೊ ನಿನ್ನ ಭಕ್ತರ ಸೊಲ್ಲ // ೩ //

**– ವಿಜಯದಾಸರು**

* * *

## ಕೃತಿಕಾರರ ಪರಿಚಯ

**ಶ್ರೀ ಪಾದರಾಜ :** ದಾಸ ಶ್ರೇಷ್ಠರಲ್ಲೊಬ್ಬರು. ಕಾಲ ಕ್ರಿ.ಶ. ಸುಮಾರು ೧೪೦೪ ರಿಂದ ೧೫೦೨. ಪೂರ್ವಾಶ್ರಮದ ಹೆಸರು ಲಕ್ಷ್ಮೀನಾರಾಯಣ. ದ್ವೈತತತ್ವದ ಪ್ರತಿಪಾದಕರು ಹಾಗೂ ಆದ್ಯ ಕೀರ್ತನಕಾರರು. ಚನ್ನಪಟ್ಟಣ ತಾಲೂಕಿನ ಅಬ್ಬೂರು ಗ್ರಾಮದಲ್ಲಿ ಹುಟ್ಟಿದವರು. ತಂದೆ ಶೇಷಗಿರಿಯಪ್ಪ, ತಾಯಿ ಗಿರಿಯಮ್ಮ. ಶ್ರೀರಂಗ ಕ್ಷೇತ್ರದ ಶ್ರೀ ಸ್ವರ್ಣವರ್ಣತೀರ್ಥರಿಂದ ಸಂನ್ಯಾಸ ದೀಕ್ಷೆ ಪಡೆದು ಅಲ್ಲಿಯೇ ಪೀಠಾಧಿಪತಿಗಳಾಗಿದ್ದು; ತದನಂತರ ಕೋಲಾರ ಜಿಲ್ಲೆಯ ಮುಳಬಾಗಿಲಿನ ನರಸಿಂಹತೀರ್ಥದಲ್ಲಿ ನೆಲೆಸಿ ಬೃಂದಾವನಸ್ಥರಾದರು. ಇವರ ಅಂಕಿತ ಶ್ರೀರಂಗವಿಠಲ. ಇವರ ಶಿಷ್ಯರಲ್ಲಿ ಪ್ರಮುಖರು ಶ್ರೀವ್ಯಾಸರಾಯರು. ಶ್ರೀಪಾದರಾಜ ಅವರ ೮೨ ಕೀರ್ತನೆಗಳು, ೩ ಸುಳಾದಿಗಳು, ೧೫ ಉಗಾಭೋಗಗಳು, ೧ ದಂಡಕವು ಲಭ್ಯವಾಗಿವೆ. ಮಾನವನ ಜೀವನದ ಮುಖ್ಯ ಗುರಿ ಮುಕ್ತಿ ಸಂಪಾದನೆ. ಹರಿದಾಸರು ಭಕ್ತಿಯ ಮೂಲಕ ಮುಕ್ತಿ ಪಡೆಯುವ ಮಾರ್ಗವನ್ನು ತೋರಿದರು.

## ಆಶಯ ಭಾವ

ಪ್ರಕೃತ ಪದ್ಯದಲ್ಲಿ ಮುಕ್ತಿಯನ್ನು ಬಯಸುವವರಿಗೆ ವಾತಾವರಣ ಹೇಗೆ ಅನುಕೂಲವಾಗಿರಬೇಕು ಎಂಬ ಚಿತ್ರಣವಿದೆ. ಇವರ ಕೀರ್ತನೆಗಳಲ್ಲಿ ಆತ್ಮಶೋಧನೆ, ಭಗವಂತನ ಆರಾಧನೆ, ದ್ವೈತತತ್ತ್ವ ಪ್ರತಿಪಾದನೆ ಮತ್ತು ಲೋಕನೀತಿ, ನೀತಿಬೋಧನೆಗಳು ಅಡಕವಾಗಿವೆ. **'ಕಂಗಳಿದ್ಯಾತಕೋ ಕಾವೇರಿರಂಗನ ನೋಡದ'** ಕೀರ್ತನೆ ಜನಪ್ರಿಯವಾದದ್ದು. ಶ್ರೀಯುತರ ಕೀರ್ತನೆಗಳಲ್ಲಿ ದೇಸಿಯತೆಯ ಸೊಗಡಿದೆ.



* * *

**ಗೋಪಾಲದಾಸರು :** ಇವರ ಕಾಲ ಕ್ರಿ.ಶ. ೧೭೨೧. ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮೊಸರುಕಲ್ಲಿನಲ್ಲಿ ಜನಿಸಿದರು. ತಂದೆ ಮುರಾರಿ, ತಾಯಿ ವೆಂಕಮ್ಮ, ಗುರುಗಳು ವಿಜಯದಾಸರು. ಇವರದು ಸಾಮಾನ್ಯವಾದ ರೈತ ಕುಟುಂಬ. ದಾಸರ ಮೊದಲ ಹೆಸರು ಬಾಗಣ್ಣ. ತುಂಬಾ ಬಡತನದಲ್ಲಿದ್ದ ಇವರು ಜೋತಿಷ್ಯವನ್ನು ಹೇಳುತ್ತಾ ಜೀವನ ನಿರ್ವಹಣೆ ಮಾಡುತ್ತಿದ್ದರು. ಇವರ ಅಂಕಿತನಾಮ ಗೋಪಾಲವಿಠಲ. ಇವರ ೯೬ ಕೀರ್ತನೆಗಳು, ೭೦ ಸುಳಾದಿಗಳು, ೨೧ ಉಗಾಭೋಗಗಳು ಉಪಲಬ್ದವಾಗಿವೆ.

### ಆಶಯ ಭಾವ

ದೇವರು ಭಕ್ತ ಪರಾಧೀನ. ಅನಾಥರಕ್ಷಕ. ಭಕ್ತರು ಅಚಲವಾದ ದೃಢಭಕ್ತಿಯಿಂದ ಮೊರೆಯಿಟ್ಟರೆ ಅವರ ಸಂಕಷ್ಟಗಳನ್ನು ಪರಿಹರಿಸುತ್ತಾನೆ. ಪಾತಕಗಳನ್ನು ಮಾಡಿದರು ಸಹ ಪ್ರೀತಿಯಿಂದ ಕರೆದರೆ ಬಂದು ಸಂಕಷ್ಟಗಳನ್ನು ನಿವಾರಿಸುವ ಗುಣ ಈ ಪರಮಾತ್ಮನದು. ಆದುದರಿಂದ ಆ ಭಗವಂತನ್ನು ಹೃದಯಕಮಲದಲ್ಲಿಟ್ಟು ಆರಾಧಿಸಬೇಕು. ನಂಬಿಕೆಟ್ಟವರಿಲ್ಲ. ನಂಬಿಕೆ, ಪ್ರೀತಿ, ದೃಢಸಂಕಲ್ಪಗಳು ಸದಾ ಅಚಲವಾಗಿರಬೇಕು ಎಂದು ತಮ್ಮ ಈ ಕೀರ್ತನೆಯಲ್ಲಿ ದಾಸರು ಸ್ತುತಿಸಿದ್ದಾರೆ.

* * *

**ವಿಜಯದಾಸರು :** ಇವರ ಕಾಲ ಕ್ರಿ.ಶ. ಸುಮಾರು ೧೬೮೨ – ೧೭೫೫. ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಬೇಕನಪರಿವಿಯಲ್ಲಿ ಜನಿಸಿದರು. ಮೊದಲಿನ ಹೆಸರು ದಾಸಪ್ಪ. ತಂದೆ ಶ್ರೀನಿವಾಸ, ತಾಯಿ ಕೂಸಮ್ಮ ದಂಪತಿಗಳ ಮಗನೇ ವಿಜಯದಾಸರು. ತುಂಬಾ ಬಡತನವನ್ನು ಅನುಭವಿಸುತ್ತಿದ್ದ ಕುಟುಂಬ ಇವರದು. ಕಾಶಿಯಲ್ಲಿ ನಾಲ್ಕುವರ್ಷಗಳು ಸಂಸ್ಕೃತ ಅಧ್ಯಯನ ಮಾಡುತ್ತಾರೆ. ಪುರಂದರದಾಸರು ಇವರಿಗೆ ದೀಕ್ಷೆಯಿತ್ತ ಗುರುಗಳು. ಇವರ ಅಂಕಿತನಾಮ ವಿಜಯವಿಠಲ.

## ಆಶಯ ಭಾವ

ಮಾನವನ ಜನ್ಮದ ಸಾರ್ಥಕತೆ ಮುಕ್ತಿಗಳಿಸುವಲ್ಲಿ ಇದೆ. ಇಹಲೋಕದಿಂದ ಮುಕ್ತನಾಗಲು ಸದಾ ಹರಿ ನಾಮಸ್ಮರಣೆ ಮಾಡಬೇಕು. ಅಚಲವಾದ ದೃಢ ಭಕ್ತಿಯಿಂದ ದೈವ ಸಾಕ್ಷಾತ್ಕಾರವಾಗುತ್ತದೆ. ಭಕ್ತಿ – ಭಕ್ತ ಒಂದಾದಾಗ ಮಾತ್ರ ಮುಕ್ತಿ ಸಾಧ್ಯವೆಂದು, ಈ ಪ್ರಕೃತ ಕೀರ್ತನೆಯಲ್ಲಿ ವ್ಯಕ್ತವಾಗಿದೆ.

* * *

ಪ್ರಸ್ತುತ **'ಜೀವನ ದರ್ಶನ'** ಪದ್ಯದಲ್ಲಿರುವ ದಾಸರ ಕೀರ್ತನೆಗಳನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರು ಪ್ರಕಟಿಸಿರುವ **'ಸಮಗ್ರ ದಾಸ ಸಾಹಿತ್ಯ ಸಂಪುಟ'**ಗಳಿಂದ ಆಯ್ದು ನಿಗದಿಪಡಿಸಿದೆ.

## ಪದಗಳ ಅರ್ಥ

೧. ವಿರಕ್ತಿ – ವೈರಾಗ್ಯ, ಆಸೆ ಆಮಿಷಗಳಿಗೆ ಒಳಗಾಗದಿರುವುದು; ಮುಕ್ತಿ – ಬಿಡುಗಡೆ; ಸತಿ – ಹೆಂಡತಿ; ಸುತ – ಮಗ; ಮತ– ಅಭಿಪ್ರಾಯ, ಗುರಿ ; ಜಾಣುವೆ – ಜಾಣ್ಮೆ, ಬುದ್ಧಿವಂತಿಕೆ; ಉಪಶಾಂತ – ನೆಮ್ಮದಿ, ಸಮಾಧಾನ; ಸುಸಂಗ – ಒಳ್ಳೆಯವರ ಸ್ನೇಹ; ದುಸ್ಸಂಗ – ಕೆಟ್ಟವರ ಸಹವಾಸ; ನೆರೆ – ಪೂರ್ಣ;

೨. ಪಾತಕ – ಪಾಪ, ಕೆಟ್ಟಕೆಲಸ; ನಕ್ರ – ಮೊಸಳೆ; ಬಾಧೆ – ನೋವು, ಸಂಕಟ; ವ್ರಜ – ಗುಂಪು, ಹಿಂಡು; ತ್ರಿಜಗ – ಮೂರುಲೋಕ (ದೇವಲೋಕ, ಭೂಲೋಕ, ಪಾತಾಳಲೋಕ) ಅನಾಥ – ದಿಕ್ಕಿಲ್ಲದ, ತಬ್ಬಲಿ; ಮೊರೆ – ಆಶ್ರಯ; ರಮಣ – ಗಂಡ, ಯಜಮಾನ; ಕಮಲಮುಖಿ – ಲಕ್ಷ್ಮೀ.

೩. ಸದಾ – ಯಾವಾಗಲು, ಸತತ; ಮೋದ – ಆನಂದ, ಸಂತೋಷ; ಲೋಲ – ಆಸಕ್ತನಾದವ, ವಿಲಾಸಪ್ರಿಯ; ಹರಿವಾಣ – ಅಗಲವಾದ ತಟ್ಟೆ; ಘನ – ಶ್ರೇಷ್ಠ; ಅನಾದಿ – ಪುರಾತನ;ಭಕ್ತ

### ಟಿಪ್ಪಣಿ

೧. ಹಲಾಧರಾನುಜ : – 'ಹಲಾ' ಎಂದರೆ ನೇಗಿಲು, ' ಧರ ' ಎಂದರೆ ಧರಿಸಿದವನು, ಹಲಾಯುಧವನ್ನು ಹೊಂದಿದವನು ಬಲರಾಮ. ಅನುಜ ಎಂದರೆ ತಮ್ಮ ಎಂದರ್ಥ. ಬಲರಾಮನ ತಮ್ಮ ಶ್ರೀಕೃಷ್ಣ.

೨. ಅಜಮಿಳ : – ಕನ್ಯಾಕುಬ್ಜದಲ್ಲಿದ್ದ ಒಬ್ಬ ಬ್ರಾಹ್ಮಣ. ಈತ ಮಾತಾಪಿತೃಗಳನ್ನೂ, ಧರ್ಮಪತ್ನಿಯನ್ನೂ ಪರಿತ್ಯಾಗಮಾಡಿ, ಶೂದ್ರ ಸ್ತ್ರೀ ಸಂಪರ್ಕ ಮೊದಲಾದ ಅನೇಕ

ದುರಾಚಾರಗಳಿಂದ ಪತಿತನಾಗಿದ್ದರೂ ಪ್ರಾಣಬಿಡುವ ಸಮಯದಲ್ಲಿ ತನ್ನ ಮಗನಾದ ನಾರಾಯಣನೆಂಬುವನನ್ನು ಕರೆದು ನಾರಾಯಣ ಸ್ಮರಣ ಮಹಿಮೆಯಿಂದ ದಿವ್ಯಗತಿಯನ್ನು ಪಡೆದನು.

೩. ನವರತ್ನ : ಒಂಬತ್ತು ರತ್ನಗಳು : ಮುತ್ತು, ಮಾಣಿಕ್ಯ, ವೈಢೂರ್ಯ, ಗೋಮೇಧಿಕ, ವಜ್ರ, ಹವಳ, ಮರಕತ, ಪುಷ್ಯರಾಗ (ಪದ್ಮರಾಗ), ನೀಲ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ವ್ಯಕ್ತಿಯು ಮುಕ್ತಿ ಪಡೆಯಲು ಏನು ಮಾಡಬೇಕು?

೨. ಸುತರಲ್ಲಿ ಎಂತಹ ಗುಣವಿರಬೇಕು?

೩. ದೇವನು ಯಾರ ಪಾತಕಗಳನ್ನು ಪರಿಹರಿಸುವವನು?

೪. ದೇವನು ಯಾವ ಮಂತ್ರಕ್ಕೆ ಒಲಿಯುವನು?

೫. ಸದಾ ಹೃದಯದಲ್ಲಿ ವಾಸಮಾಡು ಎಂದು ಯಾರನ್ನು ಕೇಳಿದ್ದಾರೆ?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯದಲ್ಲಿ ಉತ್ತರಿಸಿ.**

೧. ಮುಕ್ತಿ ಪಡೆಯಲು ಹೇಗೆ ನಡೆದುಕೊಳ್ಳಬೇಕು?

೨. ದೇವನು ತನ್ನ ಭಕ್ತರನ್ನು ಹೇಗೆ ರಕ್ಷಿಸಿದರೆಂದು ಗೋಪಾಲದಾಸರು ಹೇಳಿದ್ದಾರೆ?

೩. ಮುಕ್ತರಾಗಲು ಏನು ಮಾಡಬೇಕೆಂದು ವಿಜಯದಾಸರು ಹೇಳಿದ್ದಾರೆ?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಐದು ಆರು ವಾಕ್ಯದಲ್ಲಿ ಉತ್ತರಿಸಿ.**

೧. ಶ್ರೀಪಾದರು ನೀಡಿರುವ ಜೀವನ ಸಂದೇಶ ತಿಳಿಸಿ.

೨. ಗೋಪಾಲದಾಸರು ದೇವರು ಭಕ್ತಪ್ರಿಯ ಎಂಬುದನ್ನು ಹೇಗೆ ವಿವರಿಸಿದ್ದಾರೆ.

**ಈ. ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ಸುಸಂಗ ಹಿಡಿಯಲೆಬೇಕು ದುಸ್ಸಂಗ ಬಿಡಬೇಕು"

೨. "ಅನಾದಿ ಮೊರೆಯ ಕೇಳಿ ಆ ನಿಮಿಷದೊಳು ಒದಗಿದಾತ"

೩. "ನಿನ್ನ ನಾಮ ಬಿಡುವನಲ್ಲ ಎನ್ನ ನೀನು ಬಿಡಲು ಸಲ್ಲ"

**ಉ. ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದ ಬರೆಯಿರಿ.**

೧. ಶ್ರೀಪಾದರು : ಅಬ್ಬೂರು : : ಗೋಪಾಲದಾಸರು : ________

೨. ಜ್ಞಾನವೆಂಬೋ : ನವರತ್ನ : : ಭಕ್ತಿರಸವೆಂಬೋ : ________

೩. ಹೃದಯ : ಎದೆ : : ಜ್ಞಾನ : ________

೪. ಗೋಪಾಲದಾಸರು : ಗೋಪಾಲವಿಠಲ : : ವಿಜಯದಾಸರು : ___________

೫. ಮೋದ : ಆನಂದ : : ರಮಣ : _________________

## ಪ್ರಾಯೋಗಿಕ ಭಾಷಾಭ್ಯಾಸ

**ಅ. ಈ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.**

ಸತಿ ನಕ್ರ ರಮಣ ಪಾತಕ ಮೋದ ಅನಾಥ

**ಆ. ಕೊಟ್ಟಿರುವ ಪದಗಳಿಗೆ ತದ್ಭವ ರೂಪ ಬರೆಯಿರಿ.**

ಮುಕ್ತಿ ಹೃದಯ ಪಕ್ಷಿ ಶ್ರೀ ಮುಕ್ತ ಮಾಣಿಕ್ಯ

## ಪಠ್ಯಾಧಾರಿತ ಚಟುವಟಿಕೆ

**ಕೊಟ್ಟಿರುವ ಪದ್ಯಭಾಗವನ್ನು ಕಂಠಪಾಠ ಮಾಡಿ.**

೧. ಶ್ರೀಪಾದರಾಜರ ಕೀರ್ತನೆಯಲ್ಲಿನ ಎರಡು ಮತ್ತು ಮೂರನೆ ಚರಣದ (ಸತಿ ಅನುಕೂಲ ------------- - ಉಪಶಾಂತವಿರಬೇಕು) ನಾಲ್ಕು ಸಾಲುಗಳು.

೨. ವಿಜಯದಾಸರ ಕೀರ್ತನೆಯ ಮೊದಲೆರಡು ಚರಣ (ಜ್ಞಾನವೆಂಬೋ --------- ---------- ಮುತ್ತಿನಾರತಿಯೆತ್ತುವೆ) ನಾಲ್ಕು ಸಾಲುಗಳು.



## ಪೂರಕ ಓದು

- ಡಾ. ಜಿ ವರದರಾಜರಾವ್ ಅವರು ಸಂಪಾದಿಸಿರುವ ಶ್ರೀಪಾದರಾಜರ ಕೃತಿಗಳು ಪುಸ್ತಕವನ್ನು ಓದಿರಿ.
- ಕಾವ್ಯಪ್ರೇಮಿಯವರು ಸಂಪಾದಿಸಿರುವ 'ವಿಜಯದಾಸರ ಹಾಡುಗಳು' ಪುಸ್ತಕವನ್ನು ಓದಿರಿ.
- ಡಾ. ಟಿ.ಎಸ್. ನಾಗರತ್ನರವರು ಸಂಪಾದಿಸಿರುವ ಶ್ರೀ ಗೋಪಾಲದಾಸರ ಕೃತಿಗಳು ಪುಸ್ತಕವನ್ನು ಓದಿರಿ.



# ೮. ರಾಮಧಾನ್ಯ ಚರಿತೆ




**ಕನಕದಾಸರು–**

**ಪ್ರವೇಶ :** ಸಾಹಿತ್ಯವು ಸಾಮಾಜಿಕ ವ್ಯವಸ್ಥೆಯ ಕೈಗನ್ನಡಿಯಾಗಿದೆ. ಈ ಕಾರಣದಿಂದಾಗಿ ಸಮಾಜ ಸುಧಾರಣೆಯಲ್ಲಿ ಸಾಹಿತ್ಯ ಪ್ರಮುಖ ಪಾತ್ರ ವಹಿಸುತ್ತದೆ. ಸಾಹಿತ್ಯದ ಮೂಲಕ ಸಮಾಜದ ಓರೆ–ಕೋರೆಗಳನ್ನು ತಿದ್ದಿ ತೀಡಬೇಕೆಂಬ ಆಶಯವೂ ಇದೆ. ಈ ನಿಟ್ಟಿನಲ್ಲಿ ೧೫–೧೬ನೇ ಶತಮಾನದಲ್ಲಿ ಮೂಡಿಬಂದ ಆಧ್ಯಾತ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಸುಧಾರಣಾ ಸಾಹಿತ್ಯ ಪ್ರಕಾರವೇ ದಾಸಸಾಹಿತ್ಯ. ಈ ಶತಮಾನದಲ್ಲಿ ವ್ಯಾಸರಾದಿಯಾಗಿ ಪುರಂದರದಾಸರು, ಕನಕದಾಸರು, ವಿಜಯದಾಸರು ಮೊದಲಾದವರು ಹರಿದಾಸ ಪರಂಪರೆಯನ್ನು ಹುಟ್ಟುಹಾಕಿ ಸಾಮಾಜಿಕ ಪರಿವರ್ತನೆಗೆ ನಾಂದಿ ಹಾಡಿದ್ದಾರೆ.

ರಾಮಧಾನ್ಯ ಚರಿತೆಯು ಅತ್ಯಂತ ಚರ್ಚಿತವಾದ ಕೃತಿ. ಇದಕ್ಕೆ ಕಾರಣ ಇದರಲ್ಲಿ ಬರುವ ವ್ರಿಹಿ (ಭತ್ತ) ಹಾಗೂ ನರೆದಲಗ (ರಾಗಿ)ಗಳ ಸಂವಾದ ಜಾತಿಗಳ ನಡುವಿನ ವಿಷಮತೆಯನ್ನೂ, ಬಂಡಾಯದ ಧ್ವನಿಯಾಗಿಯೂ, ಶ್ರೀಮಂತ ಬಡವರ ಪ್ರತಿನಿಧಿಗಳಾಗಿ ಮತ್ತು ಸಂಸ್ಕೃತ ಕನ್ನಡ ಭಾಷೆಗಳ ವಾದವಾಗಿಯೂ ನೋಡುವುದರಿಂದ ಈ ಕೃತಿಗೆ ಹೆಚ್ಚಿನ ಹೆಗ್ಗಳಿಕೆ ಇದೆ. ಭತ್ತ ಮತ್ತು ರಾಗಿಗಳ ಜಗಳ, ಇದು ಪರಿಹಾರಗೊಂಡ ರೀತಿಯನ್ನು ಇಲ್ಲಿ ನಿರೂಪಿಸಲಾಗಿದೆ.



ಕೆಲರು ಗೋದಿಯ ಸಾಮೆಯನು ಕೆಲ
ಕೆಲರು ನವಣೆಯ ಕಂಬು ಜೋಳವ
ಕೆಲರು ಹಾರಕವೆಂದು ಕೆಲವರು ನೆಲ್ಲನತಿಶಯವ
ಕೆಲರು ನರೆದಲೆಗನನು ಪತಿಕರಿ
ಸಲದ ನೋಡಿದ ನೃಪತಿಯದರೊಳು
ಹಲವು ಮತವೇಕೊಂದನೇ ಪೇಳೆನಲು ಗೌತಮನು. ॥ ೧ ॥

ದಾಶರಥಿ ಚಿತ್ತೈಸು ನಮ್ಮಯ
ದೇಶಕತಿಶಯ ನರೆದಲೆಗನೇ
ವಾಸಿಯುಳ್ಳವನೀತ ಮಿಕ್ಕಿನ ಧಾನ್ಯವೇಕೆನಲು
ಲೇಸನಾಡಿದೆ ಮುನಿಪ ಗೌತಮ
ದೋಷರಹಿತನು ಪಕ್ಷಪಾತವ
ನೀಸು ಪರಿಯಲಿ ಮಾಡುವರೆ ಶಿವಯೆಂದನಾವ್ರಿಹಿಗ ॥ ೨ ॥



ಎಲ್ಲ ಧರ್ಮದ ಸಾರವನು ನೀವ್
ಬಲ್ಲಿರರಿಯಿರೆ ಎಲ್ಲರನು ನೀ
ವಿಲ್ಲಿ ನುಡಿವ ಉಪೇಕ್ಷೆಯುಂಟೇ ಸಾಕದಂತಿರಲಿ
ನೆಲ್ಲು ನಾನಿರೆ ಗೋದಿ ಮೊದಲಾ
ದೆಲ್ಲ ಧಾನ್ಯಗಳಿರಲು ಇದರಲಿ
ಬಲ್ಲಿದನು ನರೆದಲೆಗನೆಂಬುದಿದಾವ ಮತವೆಂದ ॥ ೩ ॥

ಏನೆಲವೊ ನರೆದಲಗ ನೀನು ಸ
ಮಾನನೇ ಎನಗಿಲ್ಲಿ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ
ಜಾನಕೀ ಪತಿ ಸನಿಹದಲಿ ಕುಲ
ಹೀನ ನೀನು ಪ್ರತಿಷ್ಠ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಭಂಗಿಸಿದ ॥ ೪ ॥

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಿಹೆನೆಂದನಾ ವ್ರಿಹಿಗ ॥ ೫ ॥

ಸತ್ಯಹೀನನು ಬಡವರನು ಕ
ಣ್ಣೆತ್ತಿನೋಡೆ ಧನಾಢ್ಯರನು ಬೆಂ
ಬತ್ತಿ ನಡೆವ ಅಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗೆ
ಪತ್ಯ ನೀನಹೆ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ॥ ೬ ॥

ಮಳೆದೆಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದೆ
ಅಳಿವ ಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೆ
ಎಲವೊ ನೀನೆಲ್ಲಿಹೆಯೊ ನಿನ್ನಯ
ಬಳಗವದು ತಾನೆಲ್ಲಿಹುದು ಈ
ಹಲವು ಹುಲು ಧಾನ್ಯಗಳೆನಗೆ ಸರಿದೊರೆಯೆ ಕೇಳೆಂದ ॥ ೭ ॥

ಮಸೆದುದಿತ್ತಂಡಕ್ಕೆ ಮತ್ಸರ
ಪಿಸುಣ ಬಲರತಿ ನಿಷ್ಠುರರು ವಾ
ದಿಸಲು ಕಂಡನು ನೃಪತಿ ಮನದಲಿ ನೋಡಿ ನಸುನಗುತ
ಹಿಸುಣರಿವದಿರ ಮತ್ಸರವ ಮಾ
ಣಿಸುವ ಹದನೇನೆನುತ ಯೋಚಿಸಿ
ದ ಸುರ ಮುನಿಪರ ನೋಡೆ ಗೌತಮ ಮುನಿಪನಿಂತೆಂದ ॥ ೮ ॥

ಅರಸುಗಳು ನಾವೆಲ್ಲ ಭೂಮೀ
ಸುರರುನೆರೆದಿಹ ದಾನವರು ವಾ
ನರರು ನಮಗೀ ನ್ಯಾಯವನು ಪರಿಹರಿಸಲಳವಲ್ಲ
ಕರೆಸುವೆವು ಹರಿಹರವಿರಂಚಾ
ದ್ಯರನಯೋಧ್ಯೆಗೆ ಅವರ ಗುಣವಾ
ಧರಿಸಿ ಪೇಳ್ವರು ನಯದೊಳೆಂದನುರಾಮ ನಸುನಗುತ ॥ ೯ ॥

ಪರಮ ಧಾನ್ಯದೊಳಿಬ್ಬರೇ ಇವ
ರಿರಲಿ ಸೆರೆಯೊಳಗಾರು ತಿಂಗಳು
ಹಿರಿದು ಕಿರಿದೆಂಬಿವರ ಪೌರುಷವರಿಯಬಹುದಿನ್ನು
ಪುರಕೆ ಗಮನಿಸಿ ನಾವು ನಿಮ್ಮನು
ಕರೆಸುವೆವು ಕೇಳೆನುತಯೋಧ್ಯಾ
ಪುರಿಗೆ ಪಯಣವ ಮಾಡಹೇಳಿದನಾವಿಭೀಷಣಗೆ ॥ ೧೦ ॥

## ಕೃತಿಕಾರರ ಪರಿಚಯ



ಸಂತ ಕವಿ, ಹರಿದಾಸ ಪರಂಪರೆಯ ಮತ್ತು ದಾಸ ಸಾಹಿತ್ಯದ ಅಶ್ವಿನಿ ದೇವತೆಗಳಲ್ಲಿ ಒಬ್ಬರೆನಿಸಿದ ಖ್ಯಾತಿಗೆ ಭಾಜನರಾದವರು ಕನಕದಾಸರು. ಇವರ ಮೊದಲ ಹೆಸರು ತಿಮ್ಮಪ್ಪನಾಯಕ. ಇವರ ಕಾಲ ಕ್ರಿ.ಶ. ೧೫೦೮. ಜನ್ಮಸ್ಥಳ ಹಾವೇರಿ ಜಿಲ್ಲೆಯ ಬಾಡ ಗ್ರಾಮ. ತಂದೆ ಬೀರಪ್ಪ ಹಾಗೂ ತಾಯಿ ಬಚ್ಚಮ್ಮ. ಇವರ ಆರಾಧ್ಯ ದೈವ ಹಾಗೂ ಅಂಕಿತನಾಮ ಕಾಗಿನೆಲೆ ಆದಿಕೇಶವ. ವಿಜಯನಗರ ಸಾಮ್ರಾಜ್ಯದಲ್ಲಿ ಸಣ್ಣ ಮಂಡಲವೊಂದರ ಡಣ್ಣಾಯಕರಾಗಿದ್ದ ತಿಮ್ಮಪ್ಪನಾಯಕನಿಗೆ ಕೊಪ್ಪರಿಗೆ ಹೊನ್ನು ದೊರೆ, ಆ ಬಂಗಾರವನ್ನೆಲ್ಲ ಬಡವರಿಗೆ ದಾನಮಾಡಿ ವೈರಾಗ್ಯ ಹೊಂದಿ ಕನಕದಾಸರಾದರು. ಇವರ ವಿಶಿಷ್ಟ ಗುಣಗಳಾದ ಭಕ್ತಿ, ವೈರಾಗ್ಯ, ಕಾವ್ಯ ರಚನಾ ಗುಣಗಳು ವ್ಯಾಸರಾಯರ ಶಿಷ್ಯರಾಗುವಂತೆ ಮಾಡಿತು. ಇವರು ರಚಿಸಿರುವ ಕೃತಿಗಳು ಹರಿಭಕ್ತಿಸಾರ, ರಾಮಧಾನ್ಯ ಚರಿತೆ, ಮೋಹನ ತರಂಗಿಣಿ, ಮತ್ತು ನಳಚರಿತ್ರೆ. ಇವಲ್ಲದೆ ನೂರಾರು ಕೀರ್ತನೆಗಳು, ಉಗಾಭೋಗ, ಸುಳಾದಿಗಳು ಮತ್ತು ಮಂಡಿಗೆಗಳನ್ನು ರಚಿಸಿದ್ದಾರೆ.



## ಆಶಯ ಭಾವ

ಪ್ರತಿಯೊಂದು ಜೀವಿಯ ಬದುಕಿಗೆ ಅತ್ಯಗತ್ಯವಾಗಿರುವ ವಸ್ತುಗಳಲ್ಲಿ ಆಹಾರವು ಒಂದು. ಆಹಾರವಿಲ್ಲದೇ ಯಾವುದೇ ಜೀವಿಯು ಬದುಕಲಾರದು. ಇಂಥ ಆಹಾರ ಧಾನ್ಯಗಳ ಮಹತ್ವವನ್ನು ತಿಳಿಸುವ ಮೂಲಕ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಪರಂಪರೆಯನ್ನು ಇಲ್ಲಿ

ಮಾರ್ಮಿಕವಾಗಿ ಬಿಂಬಿತವಾಗಿದೆ. ರಾಮಧಾನ್ಯ ಚರಿತ್ರೆ ನರೆದಲಗ (ರಾಗಿ) ವ್ರಿಹಿ (ಭತ್ತ) ಯರ ನಡುವಿನ ಜಗಳದ ಕಥೆ ಹಾಗೂ ಪರಿಹಾರಗೊಂಡ ರೀತಿಯ ನಿರೂಪಣೆ ಇದರ ಕಥಾವಸ್ತು. ಇದು ಪುರಾಣಗಳಲ್ಲಿ ಮತ್ತು ಸಾಮಾಜಿಕ ವಸ್ತುಗಳ ರೂಪಕ ವಿಧಾನದಲ್ಲಿ ಸಹಜವಾಗಿ ಮಿಳಿತಗೊಂಡಿದೆ. ಇಲ್ಲಿಯ ಪಾತ್ರಗಳು ಪ್ರಾಣಿಗಳು ಅಥವಾ ಮಾನವರಲ್ಲ. ಧಾನ್ಯ, ಜೀವ ಬೀಜಗಳಾಗಿವೆ.

ಭತ್ತ ಹಾಗೂ ರಾಗಿಯ ನಡುವಿನ ಸಂಭಾಷಣೆಯ ಮೂಲಕ ರಾಗಿ ಹೇಗೆ ತನ್ನ ಔಚಿತ್ಯವನ್ನು ಸಾಬೀತು ಪಡಿಸುತ್ತದೆ ಹಾಗೂ ರಾಮಧಾನ್ಯವೆಂಬ ಹೆಸರು ಪಡೆಯುತ್ತದೆ ಎಂಬುದನ್ನು ನಾಟಕೀಯವಾಗಿ ಈ ಕೃತಿಯಲ್ಲಿ ನಿರೂಪಿಸಲಾಗಿದೆ. ಕನಕದಾಸರು ರಾಗಿಯ ನೆಪ ಹಿಡಿದು ತಮ್ಮ ಆತ್ಮಚರಿತ್ರೆಯನ್ನು ಹೇಳುತ್ತಿರುವಂತೆ ತೋರುತ್ತದೆ. ವ್ರಿಹಿ (ಭತ್ತ) ಹಾಗೂ ನರೆದಲಗ (ರಾಗಿ) ಯ ನಡುವಿನ ಸಂಭಾಷಣೆಯು ಕನಕದಾಸರ ಸೃಜನಶೀಲತೆ, ಅತಿಶಯವನ್ನು ಸಾರುತ್ತದೆ. ರಾಮಧಾನ್ಯ ಚರಿತ್ರೆ ಈ ಕೃತಿಯು ಬಂಡಾಯ ಸಾಹಿತ್ಯದ ಬೇರು ಹಾಗೂ ನವ್ಯೋತ್ತರದ ಸೂರು ಎಂದರೆ ತಪ್ಪಾಗಲಾರದು.

ಡಾ. ಸಾ.ಶಿ. ಮರುಳಯ್ಯ ಅವರು ಸಂಪಾದಿಸಿರುವ ಕನಕದಾಸರ ಕಾವ್ಯಭಾಗ–೧ ಕೃತಿಯಿಂದ ಆಯ್ದು ನಿಗದಿಪಡಿಸಿದೆ. (ಕನಕ ಸಾಹಿತ್ಯ ದರ್ಶನ ಸಂಪುಟ–೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.)



* * *

## ಪೂರ್ವ ಕಥೆ

ಧರ್ಮರಾಯನು ತಮ್ಮಂದಿರನೊಡಗೂಡಿ ಹದಿನಾಲ್ಕು ವರ್ಷ ವನವಾಸಕ್ಕಾಗಿ ಕಾಮ್ಯಕ ವನದಲ್ಲಿರುವ ಸಂದರ್ಭ. ಶಾಂಡಿಲ್ಯ ಮುನಿಗಳು ತಮ್ಮ ಮುನಿಪರಿವಾರದೊಂದಿಗೆ ಆಗಮಿಸುತ್ತಾರೆ. ಧರ್ಮಜನು ಯಥಾರ್ಥವಾಗಿ ಸತ್ಕರಿಸುತ್ತಾನೆ. ಅರಣ್ಯವಾಸದ ಕ್ಲೇಶ ಸಂಕಷ್ಟಗಳ ಪರಿಹಾರಾರ್ಥಕವಾಗಿ ಶಾಂಡಿಲ್ಯಮುನಿಗಳು ಶ್ರೀರಾಮಚಂದ್ರನ ಚರಿತ್ರೆಯನ್ನು ನರೆದಲಗ (ರಾಗಿ) ಮತ್ತು ವ್ರೀಹಿ(ಭತ್ತ)ಯರ ಕಥೆಯನ್ನು ವಿವರಿಸುತ್ತಾರೆ. ರಾಮನ ಜನನದಿಂದ ಆರಂಭಿಸಿ, ರಾವಣನನ್ನು ಸಂಹರಿಸಿ, ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿ ದಾನವ ವಾನರ ಮುಖ್ಯರನ್ನು ಕೂಡಿಕೊಂಡು ಅಯೋಧ್ಯಾ ಅಭಿಮುಖವಾಗಿ ಪ್ರಯಾಣ ಬೆಳೆಸುತ್ತಾನೆ. ಪ್ರಯಾಣ ಕಾಲದಲ್ಲಿ ಸೀತೆಗೆ ರಮಣೀಯ ದೃಶ್ಯಗಳನ್ನು ತೋರಿಸುತ್ತಾ, ಋಷಿಗಳನ್ನು ಸಂದರ್ಶಿಸಿ ಅವರ ಆಶೀರ್ವಾದ ಪಡೆಯುತ್ತಾ ಮುಂದುವರೆಯುತ್ತಾನೆ. ಗೌತಮ ಮುನಿಯ ಆಶ್ರಮದಲ್ಲಿ ಬೆಲ್ಲ, ಸಕ್ಕರೆ, ಜೇನುತುಪ್ಪದ ರಸಾಯನಗಳು ಹಾಗೂ ವಿವಿಧ ಧಾನ್ಯಗಳಿಂದ ತಯಾರಿಸಿದ ಭಕ್ಷ್ಯಗಳ ಸಮಾರಾಧನೆಯಾಗುತ್ತದೆ. ಈ ಭಕ್ಷ್ಯಗಳ ರುಚಿ ತಾರತಮ್ಯದ ಬಗೆಗೆ ಮಾತುಕತೆಯಾಗುತ್ತದೆ.

ಶ್ರೀರಾಮ ಹನುಮಂತನೊಡನೆ ಈ ವಿಷಯವನ್ನು ಪ್ರಸ್ತಾಪಿಸಿದಾಗ, ಅವನು ನಾನು ಸವಿದ ಧಾನ್ಯದ ತನುವನೀಕ್ಷಿಸಬೇಕು ತರಿಸಿ, ಎಂದು ಕೇಳಿಕೊಳ್ಳುತ್ತಾನೆ. ಗೌತಮನು ಧಾನ್ಯಗಳನ್ನು ತರಿಸುತ್ತಾನೆ. ಧಾನ್ಯಗಳ ಶ್ರೇಷ್ಠತೆಯ ಬಗ್ಗೆ ಚರ್ಚಿತವಾಗುತ್ತದೆ.

**ಪದವಿಂಗಡಣಾ ಓದು**

೧. ಕೆಲರು ಗೋದಿಯ ಸಾಮೆಯನು ಕೆಲ ಕೆಲರು ನವಣೆಯ ಕಂಬು ಜೋಳವ ಕೆಲರು ಹಾರಕ+ಎಂದು ಕೆಲವರು ನೆಲ್ಲನು + ಅತಿಶಯವ ಕೆಲವರು ನರೆದಲಗನನು ಪತಿಕರಿಸಲು + ಅದ ನೋಡಿದ ನೃಪತಿಯು + ಅದರೊಳು ಹಲವು ಮತವು + ಏಕೆ + ಒಂದನೇ ಪೇಳು + ಎನಲು ಗೌತಮನು.

೨. ದಾಶರಥಿ ಚಿತ್ತೈಸು ನಮ್ಮಯ ದೇಶಕೆ + ಅತಿಶಯ ನರೆದಲಗನೇ ವಾಸಿ + ಉಳ್ಳವನು + ಈತ ಮಿಕ್ಕಿನ ಧಾನ್ಯವು + ಏಕೆ + ಎನಲು ಲೇಸನು + ಆಡಿದೆ ಮುನಿಪ ಗೌತಮ ದೋಷರಹಿತನು ಪಕ್ಷಪಾತವನು + ಈಸು ಪರಿಯಲಿ ಮಾಡುವರೆ ಶಿವ + ಎಂದನು ಆ ವ್ರಿಹಿಗ.

೩. ಎಲ್ಲ ಧರ್ಮದ ಸಾರವನು ನೀವ್ ಬಲ್ಲಿರಿ ಅರಿಯಿರೆ ಎಲ್ಲರನು ನೀವು + ಇಲ್ಲಿ ನುಡಿವ ಉಪೇಕ್ಷೆ + ಉಂಟೇ ಸಾಕು + ಅದಂತಿರಲಿ ನೆಲ್ಲು ನಾನು + ಇರೆ ಗೋದಿ ಮೊದಲಾದ + ಎಲ್ಲ ಧಾನ್ಯಗಳು + ಇರಲು ಇದರಲಿ ಬಲ್ಲಿದನು ನರೆದಲಗನು + ಎಂಬುದು + ಇದು + ಆವ ಮತ + ಎಂದ.

೪. ಏನು + ಎಲವೊ ನರೆದಲಗ ನೀನು ಸಮಾನನೇ ಎನಗೆ + ಇಲ್ಲಿ ನಮ್ಮನು ದಾನವಂತಕ ಬಲ್ಲನು + ಇಬ್ಬರ ಹೆಚ್ಚು ಕುಂದುಗಳ ಜಾನಕೀ ಪತಿ ಸನಿಹದಲಿ ಕುಲಹೀನ ನೀನು ಪ್ರತಿಷ್ಠ ಸುಡು ಮತಿಹೀನ ನೀನು + ಎಂದು + ಎನುತ ಖತಿಯಲಿ ಬೈದು ಭಂಗಿಸಿದ.

೫. ಕ್ಷಿತಿಯಮರರ + ಉಪನಯನದಲಿ ಸುವ್ರತ ಸುಭೋಜನ ಪರಮ ಮಂತ್ರಾಕ್ಷತೆಗಳಲಿ ಶುಭ ಶೋಭನದಲಿ + ಆರತಿಗೆ ಹಿರಿಯರಲಿ ಕ್ರತುಗಳ + ಎಡೆಯ + ಒಳಗೆ + ಅರಮನೆಯಲಿ ಪ್ರತಿ ದಿನವು ರಂಜಿಸುತ ದೇವರಿಗೆ + ಅತಿಶಯದ ನೈವೇದ್ಯ ತಾನು + ಇಹೆನು + ಎಂದನು + ಆ ವ್ರಿಹಿಗ.

೬. ಸತ್ಯಹೀನನು ಬಡವರನು ಕಣ್ಣೆತ್ತಿ ನೋಡೆ ಧನಾಢ್ಯರನು ಬೆಂಬತ್ತಿ ನಡೆವ ಅಪೇಕ್ಷೆ ನಿನ್ನದು ಹೇಳಲು + ಏನು + ಅದನು ಹೆತ್ತ ಬಾಣಂತಿಯರು ರೋಗಿಗೆ ಪತ್ಯ ನೀನು + ಇಹೆ ಹೆಣದ ಬಾಯಿಗೆ ತುತ್ತು ನೀನು + ಇಹೆ ನಿನ್ನ ಜನ್ಮ ನಿರರ್ಥಕರವು + ಎಂದ.

೭. ಮಳೆ + ತೆಗೆದು ಬೆಳೆಯು + ಅಡಗಿ ಕ್ಷಾಮದ ವಿಲಯ ಕಾಲದೊಳ್ + ಅನ್ನ + ಇಲ್ಲದೆ ಅಳಿವ ಪ್ರಾಣಿಗಳ + ಆದರಿಸಿ ಸಲಹುವೆನು ಜಗವು + ಅರಿಯೆ ಎಲವೊ ನೀನು + ಎಲ್ಲಿ + ಇಹೆಯೊ ನಿನ್ನಯ ಬಳಗವದು ತಾನು + ಎಲ್ಲಿ + ಇಹುದು ಈ ಹಲವು ಹುಲು ಧಾನ್ಯಗಳು + ಎನಗೆ ಸರಿದೊರೆಯೆ ಕೇಳು + ಎಂದ.

೮. ಮಸೆದುದು + ಇತ್ತಂಡಕ್ಕೆ ಮತ್ಸರ ಪಿಸುಣ ಬಲರು + ಅತಿ ನಿಷ್ಠುರರು ವಾದಿಸಲು ಕಂಡನು ನೃಪತಿ ಮನದಲಿ ನೋಡಿ ನಸು ನಗುತ ಹಿಸುಣರ್ + ಇವದಿರ ಮತ್ಸರವ ಮಾಣಿಸುವ ಹದನ + ಏನು + ಎನುತ ಯೋಚಿಸಿದ ಸುರ ಮುನಿಪರ ನೋಡೆ ಗೌತಮ ಮುನಿಪನು + ಇಂತು + ಎಂದ.

೯. ಅರಸುಗಳು ನಾವೆಲ್ಲ ಭೂಮೀ ಸುರರು ನೆರೆದಿಹ ದಾನವರು ವಾನನರು ನಮಗೆ + ಈ ನ್ಯಾಯವನು ಪರಿಹರಿಸಲು + ಅಳವಲ್ಲ ಕರೆಸುವೆವು ಹರಿ ಹರ ವಿರಂಚಿ + ಆದ್ಯರನು + ಅಯೋಧ್ಯೆಗೆ ಅವರ ಗುಣವ + ಆಧರಿಸಿ ಪೇಳ್ವರು ನಯದೊಳ್ + ಎಂದನು ರಾಮ ನಸು ನಗುತ.

೧೦. ಪರಮ ಧಾನ್ಯದೊಳ್ + ಇಬ್ಬರೇ ಇವರು + ಇರಲಿ ಸೆರೆಯೊಳಗೆ + ಆರು ತಿಂಗಳು ಹಿರಿದು ಕಿರಿದು + ಎಂಬ + ಇವರ ಪೌರುಷವ + ಅರಿಯಬಹುದು + ಇನ್ನು ಪುರಕೆ ಗಮನಿಸಿ ನಾವು ನಿಮ್ಮನು ಕರೆಸುವೆವು ಕೇಳು + ಎನುತ + ಅಯೋಧ್ಯಾ ಪುರಿಗೆ ಪಯಣವ ಮಾಡ ಹೇಳಿದನು + ಆ + ವಿಭೀಷಣಗೆ.



### ಪದಗಳ ಅರ್ಥ

ಕ್ರತು – ಯಾಗ, ಯಜ್ಞ; ಕ್ಷಿತಿಯಮರರು – ಬ್ರಾಹ್ಮಣರು; ಖತಿ – ಕೋಪ, ದುಃಖ, ಅಳಲು; ನೆರೆದಲೆ – ರಾಗಿ; ನೆಲ್ಲು, – ಭತ್ತ; ಪಕ್ಷಪಾತ – ಭೇದಭಾವ ಪತಿಕರಿಸಲು – ಅಂಗೀಕರಿಸಲು; ಪಿಸುಣ – ಚಾಡಿಕೋರ, ನೀಚ; ಪ್ರತಿಷ್ಠ – ಗರ್ವ; ವಿರಂಚಿ – ಬ್ರಹ್ಮ, ಅಜ; ವ್ರಿಹಿಗ – ಭತ್ತ; ಹದನು – ರೀತಿ, ಕ್ರಮ; ಹಿಸುಣ – ಕುತ್ಸಿತ ಬುದ್ಧಿಯವ;

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ದೇಶಕೆ ಅತಿಶಯವಾದ ಧಾನ್ಯ ಯಾವುದು?

೨. ವ್ರಿಹಿ ಯಾರ ಬಾಯಿಗೆ ತುತ್ತು ಎಂದು ಹೇಳಿದೆ?

೩. ದಾಶರಥಿ ಎಂದರೆ ಯಾರು?

೪. ನರೆದಲಗ ಯಾರನ್ನು ಆದರಿಸಿ ಸಲಹುತ್ತದೆ?

೫. ಹರಿಹರ ವಿರಂಚಿಗಳನ್ನು ಏತಕ್ಕಾಗಿ ಅಯೋಧ್ಯೆಗೆ ಕರೆಸಲಾಗುತ್ತದೆ?

೬. ಸೆರೆಗೆ ಯಾರು ಯಾರನ್ನು ಹಾಕಲಾಗುತ್ತದೆ?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಶ್ರೇಷ್ಠವೆಂದು ಹೇಳಲಾಗಿರುವ ಧಾನ್ಯಗಳಾವುವು?

೨. ಗೌತಮರು ನರೆದಲಗನೆ ಶ್ರೇಷ್ಠವೆನ್ನಲು ವ್ರಿಹಿಯು ಹೇಳಿದ್ದೇನು?

೩. ವ್ರಿಹಿಯನ್ನು ಯಾವಯಾವ ಮಂಗಳ ಕಾರ್ಯಗಳಲ್ಲಿ ಬಳಸಲಾಗುತ್ತದೆ?

೪. ನರೆದಲಗವು ವ್ರಿಹಿಯನ್ನು ಏನೆಂದು ಹೀಯಾಳಿಸಿತು?

೫. ಶ್ರೀರಾಮನು ಧಾನ್ಯಗಳ ವಿಚಾರದಲ್ಲಿ ಕೈಗೊಂಡ ತೀರ್ಮಾನವೇನು?

**ಇ. ಕೆಳಗಿನ ಪ್ರಶ್ನೆಗಳಿಗೆ ಏಳು–ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

೧. ಶ್ರೀರಾಮನು ನರೆದಲಗ ಹಾಗೂ ವ್ರಿಹಿಯನ್ನು ಸೆರಮನೆಗೆ ಹಾಕಲು ಕಾರಣವೇನು?

೨. ನರೆದಲಗ ಹಾಗೂ ವ್ರಿಹಿಗಳ ನಡುವೆ ನಡೆದ ಸಂವಾದವನ್ನು ನಿಮ್ಮ ಮಾತುಗಳಲ್ಲಿ ವಿವರಿಸಿ.

**ಈ. ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ನಮ್ಮಯ ದೇಶಕತಿಶಯ ನರೆದಲಗ"

೨. "ಕುಲಹೀನ ನೀನು ಪ್ರತಿಷ್ಠ ಸುಡು ಮತಿಹೀನ ನೀನು"

೩. "ವಿಲಯಕಾಲದೊಳನ್ನವಿಲ್ಲದೆ ಅಳಿವ ಪ್ರಾಣಿಗಳಾಧರಿಸಿ ಸಲಹುವೆ"

೪. "ಇವರಿರಲಿ ಸೆರೆಯೊಳಗಾರು ತಿಂಗಳು"

**ಉ. ಮೊದಲೆರೆಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದ ಬರೆಯಿರಿ.**

೧. ಪುರಂದರದಾಸರು : ಪುರಂದರವಿಠಲ : : ಕನಕದಾಸರು : ____________

೨. ವ್ರಿಹಿ : ಭತ್ತ : : ನರೆದಲಗ : : ____________

೩. ಬಾಣಂತಿಯರಿಗೆ : ಪಥ್ಯ : : ಹೆಣದ ಬಾಯಿಗೆ : ____________

೪. ಕ್ಷಿತಿ : ಭೂಮಿ : : ವಿರಂಚಿ : ____________

೫. ಸೆರೆಯೊಳಗೆ : ಆಗಮಸಂಧಿ : : ತಾನೆಲ್ಲಿ : ____________

**ಊ. ಗುಂಪಿಗೆ ಸೇರದ ಪದಗಳನ್ನು ಆಯ್ದು ಬರೆಯಿರಿ.**

೧. ಹರಿಭಕ್ತಸಾರ  ರಾಮಧಾನ್ಯಚರಿತ್ರೆ  ರಾಮಾಶ್ವಮೇಧಂ  ನಳಚರಿತ್ರೆ

೨. ಕನಕದಾಸರು  ಪುರಂದರದಾಸರು  ವ್ಯಾಸರಾಯರು  ಬಸವಣ್ಣ.

೩. ವ್ರಿಹಿ  ಗೋಧಿ  ನೆಲ್ಲು  ಭತ್ತ

೪. ಗುಣಸಂಧಿ  ಲೋಪಸಂಧಿ  ಆಗಮಸಂಧಿ  ಆದೇಶಸಂಧಿ.

## ಸೈದ್ಧಾಂತಿಕ ಭಾಷಾಭ್ಯಾಸ

### ಮಾತ್ರಾಗಣ : ಪರಿಚಯಾತ್ಮಕ ವಿವರ

**ಮಾತ್ರೆ** : ಛಂದಶ್ಶಾಸ್ತ್ರದಲ್ಲಿ ಮಾತ್ರೆ, ಎಂದರೆ ಕಾಲವನ್ನು ಅಳೆಯುವ ಮಾನ. ಒಂದು ಹ್ರಸ್ವ ಅಕ್ಷರವನ್ನು ಉಚ್ಚರಿಸಲು ಬೇಕಾಗುವ ಕಾಲವೇ **ಒಂದು ಮಾತ್ರಾಕಾಲ**. ಮಾತ್ರೆಗಳಲ್ಲಿ **ಲಘು** ಮತ್ತು **ಗುರು** ಎಂಬ ಎರಡು ವಿಧಗಳಿವೆ. ಲಘುವನ್ನು **'U'** ಎಂತಲೂ ಗುರುವನ್ನು **'—'** ಎಂತಲೂ ಗುರುತಿಸಲಾಗುವುದು.

ಒಂದು ಮಾತ್ರಾ ಕಾಲದಲ್ಲಿ ಉಚ್ಚರಿಸಬಹುದಾದ ಅಕ್ಷರವೇ **ಲಘು**. ಎರಡು ಅಥವಾ ಎರಡಕ್ಕಿಂತ ಹೆಚ್ಚು ಮಾತ್ರಾ ಕಾಲದಲ್ಲಿ ಉಚ್ಚರಿಸಬಹುದಾದ ಅಕ್ಷರವೇ **ಗುರು**.

**ಗುರು ಎನಿಸುವ ಅಕ್ಷರಗಳು :**

| | | | |
|---|---|---|---|
| | | — U | — U U |
| ✦ **ದೀರ್ಘಾಕ್ಷರಗಳು** | = | ಕಾ ಲು | ಆ ಗ ಸ |
| | | — U U | — U U |
| ✦ **ಸಂಯುಕ್ತಾಕ್ಷರದ ಹಿಂದಿನ ಅಕ್ಷರ** | = | ಅ ಕ್ಷ ರ | ಭ ಕ್ಷ ಣೆ |
| | | — U U | — U |
| ✦ **ಅನುಸ್ವಾರ, ವಿಸರ್ಗಗಳಿಂದ ಕೂಡಿರುವ ಅಕ್ಷರ** | = | ಬಂ ದ ನು | ದುಃಖ |
| | | U U — | U U — |
| ✦ **ವ್ಯಂಜನಾಕ್ಷರದ ಹಿಂದಿನ ಅಕ್ಷರ** | = | ಬರುವಳ್ | ಮರಗಳ್ |
| | | — U | — U U |
| ✦ **ಐ, ಔ ಸಹಿತವಾದ ಅಕ್ಷರ** | = | ಗೈ ಮೆ | ಔ ಷ ಧ |

✦ **ಷಟ್ಪದಿಯ ಮೂರು ಮತ್ತು ಆರನೆಯ ಪಾದಗಳ ಕೊನೆಯ ಅಕ್ಷರ** : ಈ ಅಕ್ಷರಗಳು ಒಂದು ಮಾತ್ರಾ ಲಕ್ಷಣ ಕೂಡಿದ್ದರೂ ಹಾಡುವಾಗ ಎರಡು ಮಾತ್ರಾಕಾಲಗಳಲ್ಲಿ ಉಚ್ಚರಿಸಲ್ಪಡುತ್ತವೆ. ಹಾಗಾಗಿ ಈ ಅಕ್ಷರಗಳು **ಗುರು** ಎನಿಸಿಕೊಳ್ಳುವ ಯಾವುದೇ ಲಕ್ಷಣಗಳನ್ನು ಪಡೆಯದಿದ್ದರೂ **ಗುರುವಾಗಿಯೇ** ಪರಿಗಣಿಸಲ್ಪಡುತ್ತವೆ.

**ಮಾತ್ರಾಗಣ** : ಮಾತ್ರೆಗಳ ಆಧಾರದಿಂದ ಗಣವಿಭಾಗ ಮಾಡಲಾಗುವ **ಮಾತ್ರಾಗಣದಲ್ಲಿ**

| | | | |
|---|---|---|---|
| — — | U — U | — — | = ೧೨ |
| ಕಾ ವೇ | ರಿ ಯಿಂದ | ಮಾ ಗೋ | |

| | | | | | |
|---|---|---|---|---|---|
| — U U | U U — | U — U | — — | U U — | = ೨೦ |
| ದಾ ವ ರಿ | ವ ರ ಮಿ | ರ್ದ ನಾಡ | ದಾ ಕ | ನ್ನ ಡ ದೊಳ್ | |

| | | | |
|---|---|---|---|
| — U U | U U U U | — U U | = ೧೨ |
| ಭಾ ವಿ ಸಿ | ದ ಜ ನ ಪ | ದಂ ವ ಸು | |

| | | | | | |
|---|---|---|---|---|---|
| — U U | U U — | U U U U | U U U U | — — | = ೨೦ |
| ಧಾ ವ ಳ | ಯ ವಿ ಲೀ | ನ ವಿ ಶ ದ | ವಿ ಷ ಯ ವಿ | ಶೇ ಷಂ | |

**ಮೂರು ಮಾತ್ರೆಯ ಗಣ, ನಾಲ್ಕು ಮಾತ್ರೆಯ ಗಣ ಮತ್ತು ಐದು ಮಾತ್ರೆಯ ಗಣ** ಎಂಬುದಾಗಿ ಮೂರು ವಿಧಗಳಿವೆ.. **ಕಂದ, ಷಟ್ಪದಿ, ರಗಳೆ** ಛಂದಸ್ಸುಗಳು **ಮಾತ್ರಾಗಣ** ಆಧಾರಿತ ಛಂದಸ್ಸುಗಳು.

**ಕಂದ** : ಮಾತ್ರಾಗಣ ಆಧಾರಿತ ಛಂದಸ್ಸುಗಳಲ್ಲಿ **ಕಂದ** ಕೂಡಾ ಒಂದು. ಇದು **ಚೌಪದಿ**ಯವಾಗಿರುತ್ತದೆ. ಕೊಟ್ಟಿರುವ ಪದ್ಯದ ಆಧಾರದಿಂದ ಇದರ ಲಕ್ಷಣಗಳನ್ನು ತಿಳಿದುಕೊಳ್ಳಬಹುದು.

ಈ ಪದ್ಯದಲ್ಲಿ ನಾಲ್ಕು ಪಾದಗಳಿವೆ. ಒಂದು ಮತ್ತು ಮೂರನೆಯ ಪಾದಗಳಲ್ಲಿ ತಲಾ ಹನ್ನೆರಡು ಮಾತ್ರೆಗಳಿವೆ. ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ತಲಾ ಇಪ್ಪತ್ತು ಮಾತ್ರೆಗಳಿವೆ. ಒಂದು ಮತ್ತು ಮೂರನೆಯ ಪಾದಗಳು ಮಾತ್ರಾ ಸಂಖ್ಯೆಯಲ್ಲಿ ಪರಸ್ಪರ ಸಮವಾಗಿವೆ. ಹಾಗೆಯೇ ಎರಡು ಮತ್ತು ನಾಲ್ಕನೆಯ ಪಾದಗಳು ಪರಸ್ಪರ ಸಮವಾಗಿವೆ. ಹಾಗಾಗಿ ಮೊದಲೆರಡು ಪಾದಗಳನ್ನು **ಪೂರ್ವಾರ್ಧ** ಎಂತಲೂ ಮೂರು ಮತ್ತು ನಾಲ್ಕನೆಯ ಪಾದಗಳನ್ನು **ಉತ್ತರಾರ್ಧ**ವೆಂತಲೂ ಕರೆಯಬಹುದು. ಪ್ರತಿಪಾದಗಳೂ ತಲಾ **ನಾಲ್ಕು ಮಾತ್ರೆಗಳ ಗಣದಂತೆ** ವಿಭಾಗಿಸಲ್ಪಟ್ಟಿವೆ.

**ಲಕ್ಷಣ :**

- ✦ ನಾಲ್ಕು ಪಾದಗಳಿರಬೇಕು.
- ✦ ಒಂದು ಮತ್ತು ಮೂರನೆಯ ಪಾದಗಳು ಪರಸ್ಪರ ಸಮವಾಗಿದ್ದು ನಾಲ್ಕು ಮಾತ್ರೆಗಳ ತಲಾ ಮೂರು ಮೂರು ಗಣಗಳಿರಬೇಕು.

- ಎರಡು ಮತ್ತು ನಾಲ್ಕನೆಯ ಪಾದಗಳು ಪರಸ್ಪರ ಸಮವಾಗಿದ್ದು ನಾಲ್ಕು ಮಾತ್ರೆಗಳ ತಲಾ ಐದೈದು ಗಣಗಳಿರಬೇಕು.
- ಪ್ರತಿ ಪಾದವೂ ಆದಿಪ್ರಾಸದಿಂದ ಕೂಡಿರಬೇಕು.

**ಷಟ್ಪದಿ** : ಆರು ಪಾದಗಳಿಂದ ಕೂಡಿರುವ ಪದ್ಯವೇ **ಷಟ್ಪದಿ**. ಷಟ್ಪದಿಯಲ್ಲಿ **ಶರ, ಕುಸುಮ, ಭೋಗ, ಭಾಮಿನಿ, ವಾರ್ಧಕ, ಪರಿವರ್ಧಿನಿ** ಎಂಬ ಆರು ವಿಧಗಳಿವೆ. **ಭಾಮಿನಿ ಷಟ್ಪದಿ** ಇಂತಿದೆ:

| | | | | |
|---|---|---|---|---|
| ೩ | ೪ | ೩ | ೪ | |
| UUU | UUUU | UUU | UU— | = ೧೪ |
| ಕ್ಷಿತಿಯ | ಮರರುಪ | ನಯನ | ದಲಿಸು | |

| | | | | |
|---|---|---|---|---|
| ೩ | ೪ | ೩ | ೪ | |
| UUU | —UU | UUU | — — | = ೧೪ |
| ವ್ರತಸು | ಭೋಜನ | ಪರಮ | ಮಂತ್ರಾ | |

| | | | | | | | |
|---|---|---|---|---|---|---|---|
| ೩ | ೪ | ೩ | ೪ | ೩ | ೪ | ಗು | |
| UUU | UUUU | — U | UU — | UUU | UUUU | — | = ೨೩ |
| ಕ್ಷ ತೆಗ | ಳಲಿಶುಭ | ಶೋಭ | ನದಲಾ | ರತಿಗೆ | ಹಿರಿಯರ | ಲಿ | |

| | | | | |
|---|---|---|---|---|
| ೩ | ೪ | ೩ | ೪ | |
| UUU | UUUU | UUU | UU— | = ೧೪ |
| ಕ್ರತುಗ | ಳೆಡೆಯೊಳ | ಗರಮ | ನೆಯಲಿ | |

| | | | | |
|---|---|---|---|---|
| ೩ | ೪ | ೩ | ೪ | |
| UUU | UU— | UUU | —UU | = ೧೪ |
| ಪ್ರತಿದಿ | ನವುರಂ | ಜಿಸುತ | ದೇವರಿ | |

| | | | | | | | |
|---|---|---|---|---|---|---|---|
| ೩ | ೪ | ೩ | ೪ | ೩ | ೪ | ಗು | |
| UUU | UU— | —U | —UU | —U | —UU | — | = ೨೩ |
| ಗತಿಶ | ಯದನ್ಶೈ | ವೇದ್ಯ | ತಾನಿಹೆ | ನೆಂದ | ನಾವ್ರಿಹಿ | ಗ | |

ಈ ಪದ್ಯದಲ್ಲಿ ಆರು ಪಾದಗಳಿವೆ. ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳಲ್ಲಿ ತಲಾ ೧೪ ಮಾತ್ರೆಗಳಿವೆ. ಮೂರು ಮತ್ತು ಆರನೆಯ ಪಾದಗಳಲ್ಲಿ ತಲಾ ೨೧ ಮಾತ್ರೆ ಮತ್ತು ಒಂದು ಗುರು ಇದೆ. ಮಾತ್ರಾಸಂಖ್ಯೆಯ ಆಧಾರದಿಂದ ನೋಡಿದಾಗ ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳು ಒಂದಕ್ಕೊಂದು ಸಮ. ಮೂರು ಮತ್ತು ಆರನೆಯ ಪಾದಗಳು ಪರಸ್ಪರ ಸಮ. ಹಾಗಾಗಿ ಒಂದು, ಎರಡು ಮತ್ತು ಮೂರನೆಯ ಪಾದಗಳನ್ನು **ಪೂರ್ವಾರ್ಧ**ವೆಂತಲೂ ನಾಲ್ಕು, ಐದು ಮತ್ತು ಆರನೆಯ ಪಾದಗಳನ್ನು **ಉತ್ತರಾರ್ಧ**ವೆಂತಲೂ ಕರೆಯಬಹುದು. ಪ್ರತಿಪಾದಗಳ ಮಾತ್ರೆಗಳನ್ನು ಮೂರರ ಅನಂತರ ನಾಲ್ಕು ಮಾತ್ರೆಗಳ ಗಣಗಳಂತೆ ವಿಭಾಗಿಸಲಾಗಿದೆ. ಮೂರು ಮತ್ತು ಆರನೆಯ ಪಾದದ ಕೊನೆಯ ಅಕ್ಷರವನ್ನು ಗಣಕ್ಕೆ ಗಣಿಸಲಾಗಿಲ್ಲ.

**ಲಕ್ಷಣ :**

- ಆರು ಪಾದಗಳಿರಬೇಕು.
- ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳು ಪರಸ್ಪರ ಸಮವಾಗಿದ್ದು ಮೂರು ಮಾತ್ರೆಗಳ ಅನಂತರ ನಾಲ್ಕು ಮಾತ್ರೆಗಳ ತಲಾ ಎರಡೆರಡು ಗಣಗಳಿರಬೇಕು. ಮೂರು ಮತ್ತು ಆರನೆಯ ಪಾದಗಳು ಪರಸ್ಪರ ಸಮವಾಗಿದ್ದು ಮೂರು ಮಾತ್ರೆಗಳ ಅನಂತರ ನಾಲ್ಕು ಮಾತ್ರೆಗಳ ತಲಾ ಮೂರು ಮೂರು ಗಣಗಳು ಮತ್ತು ಒಂದು ಗುರು ಇರಬೇಕು.
- ಪ್ರತಿಪಾದವೂ ಆದಿಪ್ರಾಸದಿಂದ ಕೂಡಿರಬೇಕು.

## ಅಭ್ಯಾಸ ಚಟುವಟಿಕೆ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಮಾತ್ರೆ ಎಂದರೇನು? ಉದಾಹರಣೆ ಸಹಿತ ವಿವರಿಸಿ.

೨. ಮಾತ್ರಾಗಣ ಎಂದರೇನು? ಅದರ ವಿಧಗಳಾವುವು? – ತಿಳಿಸಿ

೩. ಕಂದಪದ್ಯದ ಲಕ್ಷಣಗಳೇನು?

೪. ಷಟ್ಪದಿ ಎಂದರೇನು? ಭಾಮಿನಿ ಷಟ್ಪದಿಯ ಲಕ್ಷಣಗಳೇನು?



## ಪ್ರಾಯೋಗಿಕ ಭಾಷಾಭ್ಯಾಸ

ಅ. **'ರಾಮಧಾನ್ಯ ಚರಿತೆ'** ಪದ್ಯದ ಮೊದಲನೆಯ (ಕೆಲರು __ __ __ __ __ __ ಗೌತಮನು) ಚರಣಕ್ಕೆ ಪ್ರಸ್ತಾರ ಹಾಕಿ ಗಣ ವಿಭಾಗ ಮಾಡಿ ಛಂದಸ್ಸನ್ನು ಹೆಸರಿಸಿ.

## ಪಠ್ಯಾಧಾರ ಚಟುವಟಿಕೆ

**ಅ. ಕೊಟ್ಟಿರುವ ಪದ್ಯಭಾಗವನ್ನು ಕಂಠಪಾಠ ಮಾಡಿ.**

೧. **'ರಾಮಧಾನ್ಯ ಚರಿತೆ'** ಪದ್ಯದ ಏಳನೆಯ ಚರಣ (ಮಳೆತೆಗೆದು __ __ __ __ __ __ ಸರಿದೊರೆಯೆ ಕೇಳೆಂದ) ವನ್ನು ಕಂಠಪಾಠ ಮಾಡಿ.

## ಪೂರಕ ಓದು

- ಕನಕದಾಸರು ರಚಿಸಿರುವ ರಾಮಧಾನ್ಯ ಚರಿತೆಯನ್ನು ಓದಿರಿ.

✦ ✦ ✦ ✦ ✦

## ಪಠ್ಯ ಪೂರಕ ಅಧ್ಯಯನ

# ೧. ಕಟ್ಟುವೆವು ನಾವು

– ಎಂ. ಗೋಪಾಲಕೃಷ್ಣ ಅಡಿಗ

ಕಟ್ಟುವೆವು ನಾವು ಹೊಸ ನಾಡೊಂದನು,
– ರಸದ ಬೀಡೊಂದನು.
ಹೊಸನೆತ್ತರುಕ್ಕುಕ್ಕಿ ಆರಿಹೋಗುವ ಮುನ್ನ,
ಹರೆಯದೀ ಮಾಂತ್ರಿಕನ ಮಾಟ ಮಸುಳುವ ಮುನ್ನ,
ಉತ್ಸಾಹಸಾಹಸದ ಉತ್ತುಂಗ ವೀಚಿಗಳ
ಈ ಕ್ಷುಬ್ಧಸಾಗರವು ಬತ್ತಿ ಹೋಗುವ ಮುನ್ನ
ಕಟ್ಟುವೆವು ನಾವು ಹೊಸ ನಾಡೊಂದನು !




ನಮ್ಮೆದೆಯ ಕನಸುಗಳೇ ಕಾಮಧೇನು
ಆದಾವು, ಕರೆದಾವು ವಾಂಛಿತವನು;
ಕರೆವ ಕೈಗಿಹುದದೋ ಕನಸುಗಳ ಹರಕೆ;
ಗುರಿ ತಪ್ಪದೊಮ್ಮುಖದ ಬಯಕೆ ಬೆಂಬಲಕೆ !

ಜಾತಿಮತಭೇದಗಳ ಕಂದಕವು ಸುತ್ತಲೂ,
ದುರ್ಭೇದ್ಯವೆನೆ ಕೋಟೆಕೊತ್ತಲಗಳು;
ರೂಢಿರಾಕ್ಷಸನರಸುಗೈಯುವನು, ತೋಳ್ತಟ್ಟಿ
ತೊಡೆತಟ್ಟಿ ಕರೆಯುವನು ಸಂಗ್ರಾಮಕೆ !

ಕೋಟೆಗೋಡೆಗೆ ನಮ್ಮ ಹೆಣಗಳೇ ಮೆಟ್ಟಿಲು,
ನಮ್ಮ ಸಾವೇ ನೋವೆ ಹೊಸ ನಾಡ ತೊಟ್ಟಿಲು
ಆದಾವು; ಅಂಜುವೆದೆ ನಮ್ಮದಲ್ಲ;
ಸೋಲುಬಗೆ ವೀರನಿಗೆ ಸಲ್ಲ, ಹೊಲ್ಲ !

ಎಡರುಗಳ ಕಡಲುಗಳನೀಸಿ ಬರುವೆವು, ಘೋರ
ನೈರಾಶ್ಯದಗ್ನಿಮುಖದಲ್ಲು ಕೂಡ
ಹೊಕ್ಕು ಹೊರಡುವೆವೆಲ್ಲ ತೊಡುಕುಗಳ ಒಡಕುಗಳ
ಬಿಡಿಸಿ, ಇಡಿಗೊಳಿಸಿ ಕಟ್ಟುವೆವು ನಾಡ !

ಉತ್ಸಾಹ ಉದ್ವೇಗ ಉದ್ರೇಕಗಳ ವೀರ
ಯುವಜನದ ನಾಡ ಗುಡಿಯು;
ಅದರ ಹಾರಾಟಕ್ಕೆ ಬಾನೆ ಗಡಿಯು;
ಬರಲು ಬಿಡೆವೆಂದಿಗೂ ಅದಕೆ ತಡೆಯು !
ತಡೆವವರು ಬನ್ನಿರೋ, ಹೊಡೆವವರು ಬನ್ನಿರೋ,
ಕೆಡೆನುಡಿವ ಕೆಡೆಬಗೆವ ಕೆಡಕು ಜನರೇ ಬನ್ನಿ !
ಕೊಟ್ಟೆವಿದೊ ವೀಳೆಯವನು;
ನಿಮ್ಮೆಲ್ಲರನು ತೊಡೆದು ನಿಮ್ಮ ಮಸಣದ ಮೇಲೆ
ಕಟ್ಟುವೆವು ನಾವು ಹೊಸ ನಾಡೊಂದನು,
– ಸುಖದ ಬೀಡೊಂದನು.



## ಕೃತಿಕಾರರ ಪರಿಚಯ



ಕನ್ನಡ ನಾಡಿನ ಪ್ರಮುಖ ನವ್ಯ ಕವಿಗಳಲ್ಲಿ ಒಬ್ಬರೆನಿಸಿದವರು ಎಂ.ಗೋಪಾಲಕೃಷ್ಣ ಅಡಿಗರು. ಇವರು ಕುಂದಾಪುರ ತಾಲ್ಲೂಕು ಕೆರ್ಗಾಲು ಗ್ರಾಮದ ಮೊಗೇರಿ ಎಂಬಲ್ಲಿ ೧೮.೦೨.೧೯೧೮ ರಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬಿ.ಎ. ಆನರ್ಸ್ ಪದವಿಯನ್ನು ಹಾಗೂ ನಾಗಪುರ ವಿಶ್ವವಿದ್ಯಾಲಯಲ್ಲಿ ಇಂಗ್ಲಿಷ್ ಎಂ.ಎ. ಪದವಿ ಪಡೆದು ಹೈಸ್ಕೂಲು ಅಧ್ಯಾಪಕರಾಗಿ, ಇಂಗ್ಲಿಷ್ ಉಪನ್ಯಾಸಕರಾಗಿ, ಪ್ರೊಫೆಸರ್ ಮತ್ತು ಪ್ರಿನ್ಸಿಪಲ್‌ರಾಗಿ ಕಾರ್ಯನಿರ್ವಸಿಹಿದರು. ಬೆಂಗಳೂರಿನಲ್ಲಿ ನಿವೃತ್ತ ಜೀವನ ಕಳೆದ ಅಡಿಗರು ೧೪.೧೧.೧೯೯೨ರಲ್ಲಿ ನಿಧನರಾದರು. ಇವರು ಭಾವತರಂಗ, ಕಟ್ಟುವೆವು ನಾವು, ನಡೆದುಬಂದ ದಾರಿ, ಚಂಡೆಮದ್ದಳೆ, ಭೂಮಿಗೀತ, ಆಕಾಶದೀಪ, ಅನಾಥೆ, ಹುಲಿರಾಯ ಮತ್ತು ಇತರ ಕಥೆಗಳು ಮೊದಲಾದವು

ಅಡಿಗರ ಮುಖ್ಯ ಕೃತಿಗಳು. ಇವರಿಗೆ ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಕಬೀರ್ ಸಮ್ಮಾನ್ ಪ್ರಶಸ್ತಿ, ೧೯೯೩ ರಲ್ಲಿ ಮರಣೋತ್ತರ ಪಂಪಪ್ರಶಸ್ತಿಗಳು ಸಂದಿವೆ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಯಾವುದು ಬತ್ತಿಹೋಗುವ ಮುನ್ನ ಹೊಸನಾಡೊಂದನ್ನು ಕಟ್ಟಬೇಕು?

೨. ನಮ್ಮೆದೆಯ ಕಾಮಧೇನು ಯಾವುದು?

೩. ನಮ್ಮ ಸುತ್ತಲೂ ಇರುವ ಕಂದಕಗಳಾವುವು?

೪. ಕೋಟೆಗೋಡೆಗೆ ಮೆಟ್ಟಿಲುಗಳು ಯಾವುದು?

೫. ಕವಿ ಯಾರಿಗೆ ವೀಳೆಯವನು ಕೊಡುವೆನೆಂದಿದ್ದಾರೆ?

೬. ಹೊಸನಾಡೊಂದನ್ನು ಕಟ್ಟ ಬಯಸುವ ಕವಿ ಉತ್ಸಾಹ ಉದ್ವೇಗದಲ್ಲಿ ಹೇಳುವ ಮಾತುಗಳಾವುವು?





# ೨. ಸಾರ್ಥಕ

– ದಿನಕರ ದೇಸಾಯಿ

ನನ್ನ ದೇಹದ ಬೂದಿ – ಗಾಳಿಯಲಿ ತೂರಿಬಿಡಿ,
ಹೋಗಿ ಬೀಳಲಿ ಭತ್ತ ಬೆಳೆಯುವಲ್ಲಿ:
ಬೂದಿ–ಗೊಬ್ಬರದಿಂದ ತೆನೆಯೊಂದು ನೆಗೆದುಬರೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ನನ್ನ ದೇಹದ ಬೂದಿ–ಹೊಳೆಯಲ್ಲಿ ಹರಿಯ ಬಿಡಿ
ತೇಲಿ ಬೀಳಲಿ ಮೀನ ಬಾಯಿಯಲ್ಲಿ;
ಮುಷ್ಟಿ ಬೂದಿಯ ತಿಂದು – ಪುಷ್ಟವಾಗಲು ಮೀನು
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ನನ್ನ ದೇಹದ ಬೂದಿ–ಕೊಳದಲ್ಲಿ ಬೀಗಿ ಬಿಡಿ
ತಾವರೆಯು ದಿನದಿನವೂ ಅರಳುವಲ್ಲಿ;
ಬೂದಿ ಕೆಸರನು ಕೂಡಿ ಹೊಸ ಪಂಕಜವು ಮೂಡೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ಸತ್ತಮೇಲಾದರೂ ದೇಹ ಸೇವೆಗೆ ನಿಲಲಿ,
ಇಂದಿಗೀ ನರಜನ್ಮ ಸೇವೆಯೆಂದು
ತನ್ನ ಸ್ವಾರ್ಥವ ನೆನೆದು ವ್ಯರ್ಥವಾಗಿದೆ ದೇಹ,
ನಿಜಸೇವೆ ಗೈಯಲಿಕೆ ಬರಲಿ ಮುಂದು.

## ಕೃತಿಕಾರರ ಪರಿಚಯ



ಹೊಸಗನ್ನಡ ಸಾಹಿತ್ಯದಲ್ಲಿ **ಚುಟುಕು ಬ್ರಹ್ಮ**ನೆಂದು ಪ್ರಖ್ಯಾತರಾದವರು ದಿನಕರ ದೇಸಾಯಿಯವರು. (೧೯೦೯) ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಅಲಗೇರಿ ಎಂಬ ಪುಟ್ಟ ಹಳ್ಳಿಯವರು. ತಂದೆ ದತ್ತಾತ್ರೇಯ ದೇಸಾಯಿ ಶಾಲಾ ಮಾಸ್ತರು. ತಾಯಿ ಅಂಬಿಕಾ. ಮೈಸೂರಿನಲ್ಲಿ ಬಿ.ಎ. ಪದವಿಯನ್ನು ಪಡೆದ ಇವರು ಮುಂಬೈನ ಸೈಂಟ್ ಝೇವಿಯರ್ ಕಾಲೇಜಿನಲ್ಲಿ ಎಂ.ಎ. ಪದವಿಯನ್ನು ಪಡೆದರು. ವಿವಿಧ ಸಂಘಟನೆಗಳ ಸಂಘಟಕರಾಗಿ, ಪತ್ರಿಕಾವರದಿಗಾರರಾಗಿ, ಸಂಸದರಾಗಿ ದುಡಿದು ನವೆಂಬರ್ ೬, ೧೯೮೨ ರಲ್ಲಿ ಇಹಲೋಕ ತ್ಯಜಿಸಿದರು. ಇವರ ಪ್ರಮುಖ ಕೃತಿಗಳು ಹೂಗೊಂಚಲು, ತರುಣರ ದಸರೆ, ಕಡಲ ಕನ್ನಡ, ದಿನಕರನ ಚೌಪದಿ, ನಾಕಂಡ ಪಡುವಣ (ಪ್ರವಾಸ ಸಾಹಿತ್ಯ) ಹೀಗೆ ೧೨ ಕೃತಿಗಳನ್ನು ರಚಿಸಿದ್ದಾರೆ. ಇವರ ದಿನಕರನ ಚೌಪದಿ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಿದೆ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಗಾಳಿಯಲ್ಲಿ ಬೂದಿಯನ್ನು ತೂರಿದಾಗ ಎಲ್ಲಿ ಬೀಳುತ್ತದೆ?

೨. ಬೂದಿಯನ್ನು ಹೊಳೆಯಲ್ಲಿ ಹರಿಯಬಿಟ್ಟಾಗ ಯಾರಿಗೆ ಸಿಗುತ್ತದೆ?

೩. ದೇಹ ಏಕೆ ವ್ಯರ್ಥವಾಗಿದೆ?

೪. ಬೂದಿಯನ್ನು ಕೊಳದಲ್ಲಿ ಬಿಡುವುದರಿಂದ ಬದುಕು ಧನ್ಯವಾಗುವುದು ಹೇಗೆ? – ವಿವರಿಸಿ.

೫. **ಸಾರ್ಥಕ** ಪದ್ಯದ ಯಾವ ಅಂಶಗಳನ್ನು ನೀವು ಮೆಚ್ಚುವಿರಿ?

✦ ✦ ✦ ✦ ✦

# ೩. ಆಹುತಿ

**– ಕೊಡಗಿನ ಗೌರಮ್ಮ**

ನಾನು ಎಂ.ಎ. ಪಾಸಾಗಿದ್ದೆ. ನನ್ನ ತಂದೆತಾಯಿಯವರು ನನಗೆ ಮದುವೆ ಮಾಡಬೇಕೆಂದು ಹೆಣ್ಣು ಹುಡುಕುತ್ತಿದ್ದರು. ಅಂತೂ ಕಡೆಗೆ ಹುಡುಗಿಯೂ ನಿಶ್ಚಯವಾದಳು. ನಮ್ಮ ಮನೆಯಿಂದ ಹನ್ನೆರಡು ಮೈಲಿ ದೂರದಲ್ಲಿದ್ದ ಒಂದು ಹಳ್ಳಿಯಲ್ಲಿ ಅವಳ ಮನೆ. ಅವಳಿಗೂ ತಂದೆ ತಾಯಿ ಇದ್ದರು. ಆದರೆ ಅವರು ಬಹಳ ಬಡವರಂತೆ. ನನಗೇನೋ ಐಶ್ವರ್ಯವಂತರ ಅಳಿಯನಾಗಬೇಕೆಂದು ಬಹಳ ಆಸೆಯಿತ್ತು. ಇಂಗ್ಲೆಂಡಿಗೆ ಹೋಗಿ ಬ್ಯಾರಿಸ್ಟರನಾಗಬೇಕೆಂದು ಬಲವಾದ ಇಚ್ಛೆ. ಇಂಗ್ಲೆಂಡಿಗೆ ಹೋಗಬೇಕಾದರೆ ಹಣಬೇಕು. ನನಗಾಗಿ ತುಂಬಾ ಹಣ ಖರ್ಚು ಮಾಡುವಷ್ಟು ಅನುಕೂಲವು ನನ್ನ ತಂದೆಗಿರಲಿಲ್ಲ. ಐಶ್ವರ್ಯವಂತರ ಅಳಿಯನಾದರೆ ನಾನು ಇಂಗ್ಲೆಂಡಿಗೆ ಸುಲಭವಾಗಿ ಹೋಗಬಹುದಾಗಿತ್ತು. ಆದುದರಿಂದ ಆ ಬಡವರ ಹುಡುಗಿಯನ್ನು ಮದುವೆಯಾಗಲು ನನಗೆ ಮನಸ್ಸಿರಲಿಲ್ಲ.

ನನ್ನ ತಂಗಿ ವಿಜಯ. ಆಕೆಯನ್ನು ನಾನು 'ವಿ' ಎಂದು ಕರೆಯುತ್ತಿದ್ದೆ. ಆಕೆ ಅಣ್ಣಾ 'ಆ ಹುಡುಗಿಯನ್ನು ಮದುವೆಯಾಗಲು ಒಪ್ಪಿಗೆಯೇ ಎಂದು ಅಪ್ಪ ಕೇಳಿದರೆ ಏನು ಎನ್ನುತ್ತಿ' ಎಂದಳು. ನಾನೆಂದೆ 'ನಾನು ಅವಳನ್ನು ನೋಡಿಯೇ ಇಲ್ಲ, ನಾನು ಏನೆಂದು ಉತ್ತರ ಕೊಡಲಿ?' ಆಗ ವಿಜಯ ಎಂದಳು, 'ಅಣ್ಣ ನಾನು ಅವಳನ್ನು ನೋಡಿರುವೆ. ಅವಳು ಎಲ್ಲಾ ತರದಲ್ಲೂ ನಿನಗೆ ಯೋಗ್ಯಳಾಗಿದ್ದಾಳೆ. ಓದು ಬರೆಹ ಗೊತ್ತಿದೆ. ನೋಡುವುದಕ್ಕೆ ಅತಿ ಚೆಲುವೆ'. ನಾನಾಗ ಕೇಳಿದೆ : 'ವರದಕ್ಷಿಣೆ ಎಷ್ಟು ಕೊಡುತ್ತಾರೆ?'

ವಿಜಯ ಹೇಳಿದಳು : 'ಅಣ್ಣ, ಅಪ್ಪನಿಗೆ ವರದಕ್ಷಿಣೆಯನ್ನು ತೆಗೆದುಕೊಳ್ಳಲಿಕ್ಕೆ ಇಷ್ಟ ಇಲ್ಲ. ಅವರು ಬಹಳ ಬಡವರು ಆದರೆ ಹುಡುಗಿ ರತಿದೇವಿಯಂತೆ ಇದ್ದಾಳೆ. ಅವರೇ ಐನೂರು ರೂಪಾಯಿ ಕೊಡುವೆವೆಂದು ಹೇಳಿದ್ದಾರೆ. ಅದನ್ನು ತೆಗೆದು ಕೊಳ್ಳುವುದಕ್ಕೂ ಅಪ್ಪನಿಗೆ ಒಪ್ಪಿಗೆ ಇಲ್ಲ'. ನಾನು ಹೇಳಿದೆ : 'ವಿ, ನನಗೆ ಲಂಡನ್ನಿಗೆ ಹೋಗಿ ಲಾ ಕಲಿಯಬೇಕೆಂದು ಇಚ್ಛೆಯಿದೆ. ಅದಕ್ಕಾಗುವ ಖರ್ಚನ್ನು ಕೊಡುವುದಾದರೆ ಮಾತ್ರ ನಾನು ಆ ಹುಡುಗಿಯನ್ನು ಮದುವೆಯಾಗುತ್ತೇನೆ. ಇಲ್ಲದಿದ್ದರೆ ಇಲ್ಲ' ಆಗ ವಿಜಯ : 'ಅಣ್ಣ, ನೀನು ಎಂ.ಎ. ಪದವೀಧರ, ನಿನ್ನ ಬಾಯಿಂದ ಇಂತಹ ಮಾತು ಹೊರಡಬಹುದೇ? ನಿನ್ನನ್ನು ನೀನು ಮಾರಿಕೊಳ್ಳ ಬಯಸುವಿಯೇಕೆ?' ಎಂದು ಸ್ವಲ್ಪ ಕೋಪದಿಂದಲೇ ಹೇಳಿ ಒಳಗೆ ಹೊರಟುಹೋದಳು.

ಜಪಮಾಡಿ ಹೊರಗೆ ಬಂದು ಕುಳಿತಿದ್ದೆ ನನ್ನ ತಂದೆಯೂ ಜಪ ತೀರಿಸಿ ಹೊರಗೆ ಬಂದರು. ನೀನು ವಿಜಯಳ ಹತ್ತಿರ ಮುಂದೆ ಓದಿನ ಖರ್ಚಿಗೆ ಹಣ ಕೊಟ್ಟರೆ ಮದುವೆಯಾಗುತ್ತೇನೆ

ಎಂದೆಯಂತೆ. ಅವರು ಬಡವರು. ಆರೇಳು ಹೆಣ್ಣು ಮಕ್ಕಳು ಇದ್ದಾರೆ. ಎಲ್ಲಿಂದ ತಾನೆ ಹಣ ತರಬಲ್ಲರು? ಹುಡುಗಿ ಲಕ್ಷಣವಾಗಿದ್ದಾಳೆ. ನೀನು ದೊಡ್ಡವರ ಅಳಿಯನಾಗಿ ಲಂಡನ್ನಿಗೆ ಹೋಗುವುದಕ್ಕೆ ನನಗೆ ಒಪ್ಪಿಗೆ ಇಲ್ಲ. ಈ ಹುಡುಗಿಯನ್ನು ಮದುವೆಯಾದರೆ ಇಲ್ಲೇ ಲಾ ಓದುವ ಖರ್ಚನ್ನು ಹೇಗಾದರು ಮಾಡಿ ನಾನು ಕೊಡುತ್ತೇನೆಂದು ಹೇಳಿ ಒಳಗೆ ಹೊರಟು ಹೋದರು.

ಅಂದಿನ ರಾತ್ರಿ ಎಲ್ಲರೂ ಮಲಗಿದ ಮೇಲೆ ನಾನು ಹೊರಗೆ ಹೊರಟೆ. ನನ್ನ ಮನಸ್ಸು ಸಿಟ್ಟಿನಿಂದ ಚಂಚಲವಾಗಿತ್ತು. ಆ ಹುಡುಗಿಯನ್ನು ಮದುವೆಯಾಗುವ ಇಚ್ಛೆ ನನಗೆ ಸ್ವಲ್ಪವೂ ಇರಲಿಲ್ಲ. ತಂದೆಯಿದಿರು ನಿಂತು ಹಾಗೆ ಹೇಳುವ ಧೈರ್ಯ ನನಗಿರಲಿಲ್ಲ. ಆದುದ-ರಿಂದ ಅಂದಿನ ರಾತ್ರಿಯೇ ಮನೆ ಬಿಟ್ಟುಹೊರಟೆ. ನಮ್ಮ ಹಳ್ಳಿಯಿಂದ ರೈಲ್ವೆ ನಿಲ್ದಾಣಕ್ಕೆ ಬಂದು ರೈಲು ಹೊರಡಲು ಹತ್ತು ನಿಮಿಷವಿದ್ದ ಕಾರಣ ಮದರಾಸಿಗೆ ಒಂದು ಟಿಕೆಟ್ಟನ್ನು ತೆಗೆದುಕೊಂಡು ಒಂದು ಕಂಪಾರ್ಟಮೆಂಟಿನಲ್ಲಿ ಹೋಗಿ ಕುಳಿತೆ. ನಾನು ಕುಳಿತಲ್ಲಿ ಬೇರೆ ಯಾರು ಇರಲಿಲ್ಲ. ಮುಂದೇನು ಗತಿಯೇನೆಂದು ಆಲೋಚಿಸುತ್ತ ಕುಳಿತಿದ್ದಂತೆಯೇ ನಿದ್ರೆ ಬಂದು ಬಿಟ್ಟಿತು. ಏನೋ ಶಬ್ದವಾದಂತಾಗಿ ಕಣ್ಣು ತೆರೆದು ನೋಡಿದೆ. ನನ್ನಿದಿರು ಒಬ್ಬ ಮುದುಕ ಕುಳಿತಿದ್ದನು. ಮುದುಕನಾದರೂ ಹುಡುಗನಂತೆ ಡ್ರೆಸ್ ಮಾಡಿಕೊಂಡಿದ್ದ. ನೋಡಿದ ಕೂಡಲೇ ಮುದುಕನೆಂದು ಗೊತ್ತಾಗುತ್ತಿರಲಿಲ್ಲ. ಅವನು ಹಣವಂತನಾಗಿರಬೇಕೆಂದು ಅವನ ವೇಷಭೂಷಣಗಳಿಂದ ವ್ಯಕ್ತವಾಗುತ್ತಿತ್ತು. ಅವನು ನನ್ನನ್ನೇ ನೋಡುತ್ತಾ ಕುಳಿತಿದ್ದರೂ ಮಾತನಾಡುವಂತೆ ತೋರಲಿಲ್ಲ. ನಾನೇ ಮಾತನಾಡಬೇಕಾಗಿ ಬಂತು. 'ಸ್ವಾಮಿ ದಯಮಾಡಿ ಗಂಟೆ ಎಷ್ಟೆಂದು ಹೇಳುವಿರಾ?' ಎಂದು ಕೇಳಿದೆ. ಅವನು ಕೈಗಡಿಯಾರವನ್ನು ನೋಡಿ 'ಎರಡು ಗಂಟೆಗೆ ಹತ್ತು ನಿಮಿಷವಿದೆ' ಎಂದ. ಆ ಮುದುಕ ತುಂಬಾ ಮಾತುಗಾರ. ಅವನು ಮಾತಿಗೆ ಪ್ರಾರಂಭಿಸಿದ. ಅಂತೂ ಮದರಾಸಿಗೆ ತಲುಪುವಷ್ಟರಲ್ಲೇ ನಾವಿಬ್ಬರೂ ಸ್ನೇಹಿತರಾಗಿಬಿಟ್ಟೆವು.

ಆ ಮುದುಕ ಒಬ್ಬ ರತ್ನದ ವ್ಯಾಪಾರಿ. ನಾನು ಯಾರೆಂದು ಕೇಳಿದ್ದಕ್ಕೆ – ನಾನೊಬ್ಬ ಬಡವರ ಮಗನೆಂದೂ ಎಂ.ಎ. ಪಾಸಾಗಿದೆಯೆಂದೂ ಕೆಲಸ ಹುಡುಕುವ ಸಲುವಾಗಿ ಮದರಾಸಿಗೆ ಹೊರಟಿದ್ದೇನೆಂದೂ ಹೇಳಿದೆ. ಕೆಲಸವೇನು ಸಿಕ್ಕದಿದ್ದರೆ ಬಂದು ತನ್ನನ್ನು ಕಾಣಬೇಕೆಂದು ಹೇಳಿದ. ಅಷ್ಟು ಹೊತ್ತಿಗಾಗಲೇ ಮದರಾಸು ತಲುಪಿದೆವು. ನಾನು ಓದುವಾಗ ವಾಸವಿದ್ದ ವೈ.ಎಂ.ಸಿ.ಎ. ಗೇ ಹೋಗಿ ಅಲ್ಲಿದ್ದ ಸ್ನೇಹಿತರ ಜೊತೆಯಲ್ಲಿ ಉಳಿದೆ.

ಮರುದಿನದಿಂದ ಕೆಲಸ ಹುಡುಕಲು ಪ್ರಾರಂಭಿಸಿ ಎಲ್ಲಿಯೂ ಕೆಲಸ ಸಿಗದೇ ಕೈಯಲ್ಲಿದ್ದ ಕೆಲವು ರೂಪಾಯಿಗಳು ಖರ್ಚಾಗಿದ್ದವು. ಊಟಕ್ಕೆ ತೊಂದರೆಯಾದಾಗ ಬೇರೇನೂ ದಿಕ್ಕು ತೋಚದೇ, ರೈಲಿನಲ್ಲಿ ಸ್ನೇಹಿತನಾದ ಆ ಮುದುಕನ ಮನೆಗೆ ಹೋದೆ. ದೇವರ ದಯೆಯಿಂದ

ಅವರು ಮನೆಯಲ್ಲಿದ್ದರು. ಮಾತುಕತೆಯ ಬಳಿಕ ಕೆಲಸ ಸಿಗಲಿಲ್ಲವೆಂದವನಿಗೆ ಗೊತ್ತಾಯಿತು. ಅವನಿಗೊಬ್ಬ ಮಗಳೂ ದೂರ ಸಂಬಂಧದ ಸೊಸೆಯೂ ಇದ್ದರು. ಅವರಿಬ್ಬರಿಗೂ ಪಾಠ ಹೇಳಿಕೊಡಲು ಆಗುತ್ತದೆಯೇ ಎಂದು ನನ್ನನ್ನು ಕೇಳಿದ. ಏನೂ ಕೆಲಸವಿಲ್ಲದ ನನಗೆ ಅದೇ ಬಲು ದೊಡ್ಡ ಕೆಲಸವಾಯಿತು. ಮರುದಿನದಿಂದ ಪಾಠ ಹೇಳಲು ಉಪಕ್ರಮಿಸಿದೆ. ಮಗಳ ಹೆಸರು ಸೀತೆ, ಶಾಂತಿ ಎಂದು ಸೊಸೆಯ ಹೆಸರು.

ನಾನು ಪಾಠ ಹೇಳಲು ಮೊದಲು ಮಾಡಿ ಆರು ತಿಂಗಳುಗಳು ಸಂದಿದ್ದವು. ಹುಡುಗಿಯರಿಬ್ಬರೂ ಚೆನ್ನಾಗಿಯೇ ಪಾಠ ಕಲಿಯುತ್ತಿದ್ದರು. ಆದರೆ, ಶಾಂತಿಯಷ್ಟು ಚುರುಕಾಗಿ ಸೀತೆ ಕಲಿಯುತ್ತಿರಲಿಲ್ಲ. ಶಾಂತಿಯ ಸೌಂದರ್ಯ, ಸೌಂದರ್ಯವನ್ನಾವರಿಸಿದ್ದ ದುಃಖ, ವಿದ್ಯೆಗಳಲ್ಲಿ ಅವಳಿಗಿದ್ದ ಅಭಿರುಚಿ ಮಿತವಾದ ಮಾತು ಇವೆಲ್ಲವೂ ಸೇರಿ ನನ್ನ ಮನಸ್ಸನ್ನು ಅವಳೆಡೆಗೆ ಎಳೆಯತೊಡಗಿದವು. ಅವಳ ತಂದೆ ತಾಯಿಯರು ಅಷ್ಟೇನೂ ಅನುಕೂಲಸ್ಥರಾಗಿರಲಿಲ್ಲ. ಮಗಳ ಮದುವೆಗೆ ಬಹಳ ಪ್ರಯತ್ನ ಮಾಡುತ್ತಿದ್ದರು. ಬಡತನದ ದೆಸೆಯಿಂದ ವರದಕ್ಷಿಣೆ ಕೊಡಲಾರದೆ ಇನ್ನೂ ಮದುವೆಯಾಗಿರಲಿಲ್ಲ. ನನಗಂತು ಯಾವಾಗಲೂ ಶಾಂತಿಯ ಜಪವೇ ಆಯಿತು. ಮದುವೆಯಾದರೆ ಅವಳನ್ನು ಮದುವೆಯಾಗಬೇಕೆನಿಸಿತು; ಅವಳನ್ನು ಮದುವೆಯಾದರೆ ಲಂಡನ್ನಿಗೆ ಹೋಗಲಾಗುತ್ತಿರಲಿಲ್ಲ. ಆದುದರಿಂದ ಅವರನ್ನು ಮರೆಯಲು ಪ್ರಯತ್ನಿಸತೊಡಗಿದೆ. ಎಷ್ಟೆಷ್ಟೂ ಪ್ರಯತ್ನಿಸಿದರೂ ಅವಳ ಸದ್ಗುಣಗಳು ನನ್ನ ಮನಸ್ಸನ್ನು ಅವಳೆಡೆಗೆ ಎಳೆಯತೊಡಗಿದವು. ನಾನು ಸೀತೆಯನ್ನು ಮದುವೆಯಾಗಬಹುದಿತ್ತು ಎಷ್ಟೋ ಸಾರಿ ಅವಳ ತಂದೆ ನನ್ನನ್ನು ಹಾಸ್ಯಕ್ಕಾಗಿ 'ಅಳಿಯ' ಎಂದು ಕರೆಯುತ್ತಿದ್ದರು. ನಾನು ಅವರ ಅಳಿಯನಾದರೆ ಲಂಡನ್ನಿಗೆ ಹೋಗಬಹುದಿತ್ತು. ಆದರೆ ಎಂದಿನಿಂದ ಶಾಂತಿಯನ್ನು ಪ್ರೀತಿಸತೊಡಗಿದೆನೋ ಅಂದಿನಿಂದ ಹಣಕ್ಕಾಗಿ ಪ್ರೇಮವನ್ನು ಬಲಿಕೊಡಬಾರದೆಂದು ನನ್ನ ಮನಸ್ಸು ಹೇಳುತಲಿತ್ತು.

ಒಂಬತ್ತು ಗಂಟೆಯಾಗಿತ್ತು ನಾನು ಪಾಠದ ಕೋಣೆಯಲ್ಲಿ ಕುಳಿತು ನನ್ನ ಶಿಷ್ಯೆಯರಿಬ್ಬರನ್ನು ಇದಿರು ನೋಡುತ್ತಿದ್ದೆ. ಬಾಗಿಲ ತೆರೆದ ಶಬ್ದವಾಯಿತು. ತೆರೆದ ಬಾಗಿಲಿನಿಂದ ಒಳಗೆ ಹೊಕ್ಕಳು ಸೀತೆ. ಶಾಂತಿಯ ಸುಳಿವಿಲ್ಲ. ಅವಳನ್ನು ಕಾಣದೆ ಮನಸ್ಸಿಗೆ ವಿಷಾದವಾಯಿತು. ಆದರೆ ಕೇಳುವ ಮೊದಲೇ ಅವಳೇ ' ನೋಡಿ ಮೇಷ್ಟ್ರೆ ನಿನ್ನೆ ರಾತ್ರಿಯೇ ಶಾಂತಿಯ ತಂದೆ ಬಂದು ಅವಳನ್ನು ಊರಿಗೆ ಕರೆದುಕೊಂಡು ಹೋದರು. ಯಾಕೆಂತ ಗೊತ್ತಿದೆಯೇ? ಮದುವೆಗೆ?' ಎಂದಳು.

ಆಗ ನನಗೆ ತಿಳಿಯಿತು. ಶಾಂತಿ ಇಲ್ಲದೆ ನಾನು ಬದುಕಲಾರೆನೆಂದು. ಮೊದಲೇ ಅವಳ ತಂದೆತಾಯಿಯರನ್ನು ಕೇಳದಿದ್ದುದಕ್ಕಾಗಿ ನನ್ನನ್ನು ನಾನೆ ಹಳಿದುಕೊಂಡೆ. ಹಣದಾಸೆಯಿಂದ ನನ್ನ ಜೀವನವನ್ನು ನಾನೇ ಮಣ್ಣುಗೂಡಿಸಿಕೊಂಡ ಮೇಲೆ ಗೊತ್ತಾಯಿತು. ಶಾಂತಿ ವಿಹೀನ

ಪ್ರಪಂಚದಲ್ಲಿ ಜೀವಿಸುವುದು ಅಸಾಧ್ಯವೆಂದು. ಶಾಂತಿಯನ್ನು ಕಳೆದುಕೊಂಡು ಅಂದಿನ ದಿನವನ್ನೆಲ್ಲ ಅಶಾಂತಿಯಲ್ಲಿ ಕಳೆದನು. ಮರುದಿನ ಪಾಠದ ಹೊತ್ತಿನಲ್ಲಿ ಸೀತೆ ನನಗೊಂದು ಕಾಗದ ತೋರಿಸಿದಳು. ಶಾಂತಿಯ ಕಾಗದವನ್ನು ಓದಿದೆ. ವರದಕ್ಷಿಣೆಯನ್ನು ಕೊಡಲಾರದ ತಂದೆತಾಯಿಯರು ನಾಲ್ಕು ಜನ ಮೊಮ್ಮಕ್ಕಳಿರುವ ಮುದುಕನ್ನು ಮದುವೆಯಾಗಲಾರದೆ ಆತ್ಮಹತ್ಯೆಮಾಡಿಕೊಂಡದ್ದನ್ನು ಓದಿ, ಶಾಂತಿಯಂತಹ ಸ್ವರ್ಣಪುತ್ಥಳಿಯನ್ನು ಕೊಡುವುದೂ ಅಲ್ಲದೆ ಅವಳೊಡನೆ ವರದಕ್ಷಿಣೆಯನ್ನು ಕೊಡಬೇಕೆಂದು ಕೇಳಿದ ನೀಚನನ್ನು ಶಪಿಸಿದೆ. ಹಿಂದೊಂದು ಬಾರಿ ನಾನು ಬಡವರ ಹುಡುಗಿಯನ್ನು ಮದುವೆಯಾಗಲು ತಿರಸ್ಕರಿಸಿದ್ದುದು ದುಃಖದ ಭರದಲ್ಲಿ ಮರೆತೇ ಹೋಗಿತ್ತು. ವಿಧಿಯನ್ನು ದೂರುವ ಬದಲು ನಾನೇ ನನ್ನ ದುರಾಶೆಯನ್ನು ಬಿಟ್ಟು ಶಾಂತಿಯನ್ನು ಮದುವೆಯಾಗಿದ್ದರೆ ಆ ಮುದ್ದು ಬಾಲೆ ಈಗ ಸುಖವಾಗಿರುತ್ತಿದ್ದಳು. ನನ್ನ ತಪ್ಪಿಗಾಗಿ ನನ್ನನ್ನು ನಾನೆ ಜರಿದುಕೊಂಡೆ. ವರದಕ್ಷಿಣೆ ಎಂಬ ಪಿಶಾಚಿಯು ಅದೆಷ್ಟು ಸುಕುಮಾರಿಯರನ್ನು ಬಲಿ ತೆಗೆದುಕೊಳ್ಳುವುದೋ ದೇವರೇ ಬಲ್ಲ! ಆದರೆ ನನ್ನ ಶಾಂತಿಯನ್ನು ಅದು ಬಲಿತೆಗೆದುಕೊಂಡ ಮೇಲೆ ನನಗದರ ನಿಜಸ್ವರೂಪ ಗೊತ್ತಾಯಿತು.

ಅಂದಿನ ರಾತ್ರಿಯೇ ಊರಿಗೆ ಹೊರಟೆ. ಮರುದಿನ ಬೆಳಗಿನ ಹೊತ್ತಿನಲ್ಲಿ ಮನೆಗೆ ತಲುಪಿದೆ. ನಾನು ಹೋಗುವಾಗ ಅಮ್ಮ ಅಂಗಳ ಸಾರಿಸಿ ರಂಗವಲ್ಲಿ ಇಡುತ್ತಿದ್ದಳು. ನನ್ನ ತಂದೆಯೂ 'ವಿ'ಯೂ ಒಳಗಿದ್ದರು. ಅಮ್ಮನೊಡನೆ ಮಾತನಾಡಿ ಒಳಗೆ ಹೋದೆ. ನಾನು ಅಲ್ಲಿ ನಿಲ್ಲದೆ ನನ್ನ ಕೋಣೆಗೆ ಹೋದೆ. ಅಲ್ಲಿ ವಿಜಯ ಒಂದು ಚಿತ್ರವನ್ನು ನೋಡುತ್ತಾ ನಿಂತಿದ್ದಳು. ನನ್ನನ್ನು ಕಂಡು ಆ ಚಿತ್ರವನ್ನು ಬಚ್ಚಿಟ್ಟಳು. ಆಗವಳು ತಾನು ನೋಡುತ್ತಿದ್ದ ಪೇಪರನ್ನು ನನ್ನೆದುರು ಎಳೆದು – 'ನೋಡುತ್ತಿದ್ದುದು ನೀನು ಕೊಂದ ಹುಡುಗಿಯನ್ನು' ಎಂದಳು. ನನಗೆ ಬಹಳ ಆಶ್ಚರ್ಯವಾಯಿತು. ಪತ್ರಿಕೆಯನ್ನು ಆತುರದಿಂದ ತೆಗೆದು ನೋಡಿದೆ. ಶಾಂತಿಯ ಚಿತ್ರ. – ಅದರ ಕೆಳಗಡೆ ವರದಕ್ಷಿಣೆಗೆ ಆಹುತಿ. ಶಾಂತಿಯೇ ನಾನು ಮೊದಲು ಕೈಬಿಟ್ಟ ಕನ್ಯೆ? ಈಗ . . . . . . ಏನು ಪ್ರಯೋಜನ ! . . . .



## ಕೃತಿಕಾರರ ಪರಿಚಯ



ಕೊಡಗಿನ ಗೌರಮ್ಮನವರು ಕನ್ನಡದ ಪ್ರಥಮ ಕತೆಗಾರ್ತಿ ಎಂದು ಹೆಸರಾಗಿದ್ದಾರೆ. ಇವರು ೧೯೧೨ ಮಾರ್ಚ್ ೫ರಂದು ಮಡಿಕೇರಿಯಲ್ಲಿ ಜನಿಸಿದರು. ಸ್ವಾತಂತ್ರ್ಯ ಆಂದೋಲನದ ಸಂದರ್ಭದಲ್ಲಿ ಮಹಾತ್ಮ ಗಾಂಧೀಜಿಯವರು ಕೊಡಗಿನಲ್ಲಿ ಪ್ರವಾಸ ಕೈಗೊಂಡಾಗ ಅವರನ್ನು ತಮ್ಮ

ಮನೆಗೆ ಬರಮಾಡಿಕೊಂಡು ತಮ್ಮ ಆಭರಣಗಳನ್ನೆಲ್ಲ ದಾನ ನೀಡಿದರು. ಗೌರಮ್ಮನವರು ಮಿಸೆಸ್ ಟಿ.ಜಿ. ಕೃಷ್ಣ ಎನ್ನುವ ಹೆಸರಿನಲ್ಲಿ ಕತೆಗಳನ್ನು ಬರೆದಿದ್ದಾರೆ. ಕಂಬನಿ, ಚಿಗುರು ಹಾಗೂ ಗೌರಮ್ಮನ ಕತೆಗಳು ಅವರ ಕಥಾ ಸಂಕಲನಗಳು.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ರೈಲಿನಲ್ಲಿ ಸಿಕ್ಕಿದ ಮುದುಕನ ಉದ್ಯೋಗವೇನು?

೨. ಯುವಕನು ರೈಲಿನಲ್ಲಿ ಸಿಕ್ಕಿದ ಮುದುಕನ ಮನೆಗೆ ಏಕೆ ಬಂದನು?

೩. ಮುದುಕನ ಮಗಳು ಮತ್ತು ಸೊಸೆಯ ಹೆಸರೇನು?

೪. ವರದಕ್ಷಿಣೆಯ ಪಿಶಾಚಿ ಯಾರನ್ನು ಬಲಿ ತೆಗೆದುಕೊಂಡಿದೆ?

೫. ಯುವಕನು ಬಡವರ ಹುಡುಗಿಯನ್ನು ಮದುವೆಯಾಗದಿರಲು ಕಾರಣಗಳೇನು?

೬. ಪತ್ರಿಕೆಯನ್ನು ತೋರಿಸಿ ವಿಜಯಳು ಅಣ್ಣನಿಗೆ ಏನು ಹೇಳಿದಳು?





# ೪. ಮಗಳಿಗೆ ಬರೆದ ಪತ್ರ

**– ಮೂಲ : ಜವಹರಲಾಲ್ ನೆಹರು**
**ಅನುವಾದ: – ತಿ.ತಾ. ಶರ್ಮ, ಸಿದ್ದನಹಳ್ಳಿ ಕೃಷ್ಣಶರ್ಮ**

ಇಂದಿರಾ ಪ್ರಿಯದರ್ಶಿನಿಗೆ,
ಸೆಂಟ್ರಲ್ ಜೈಲ್, ನೈನಿ.
ಅವಳು ಹುಟ್ಟಿದ ಹಬ್ಬದ ದಿನ
೨೬.೧೦.೧೯೩೦

ನಿನ್ನ ಹುಟ್ಟಿದ ಹಬ್ಬದ ದಿನ ಆಶೀರ್ವಾದಗಳನ್ನು, ಉಡುಗೊರೆಗಳನ್ನು ಪಡೆಯುವುದು ನಿನ್ನ ಅಭ್ಯಾಸ. ಆಶೀರ್ವಾದಗಳಿಗೇನು ಕಡಿಮೆ; ಬೇಕಾದಷ್ಟನ್ನು ಕಳಿಸುತ್ತೇನೆ. ಆದರೆ ನೈನಿ ಸೆರೆಮನೆಯಿಂದ ನಾನು ನಿನಗೇನು ಬಹುಮಾನ ಕಳಿಸಲಿ, ಹೇಳು? ನನ್ನ ಬಹುಮಾನಗಳು ನಿಸ್ಸಾರ, ನಿರ್ಘನ. ಯಕ್ಷಿಣಿಯೋ, ಕಿನ್ನರಿಯೋ ನೀಡುವ – ಕೋಟೆಯ ಗೋಡೆಗಳಂತಿರುವ ಸೆರೆಮನೆಯ ಗೋಡೆಗಳು ಸಹ ತಡೆಯಲಾರದ – ಗಾಳಿಯ, ಮನಸ್ಸಿನ, ನಿರಾಕಾರದ ವಸ್ತುವದು.

ಪ್ರಿಯ! ನೀ ಚೆನ್ನಾಗಿ ಬಲ್ಲೆ; ಉಪದೇಶ ಮಾಡುವುದೆನಗೆ ಇಷ್ಟವಿಲ್ಲ; ಬುದ್ಧಿವಾದ ಕೊಡುವುದೆಂದರೆ ನನಗೆ ಬೇಸರ. ಯಾವಾಗಲಾದರೂ ಹಾಗೆ ಮಾಡಬೇಕೆಂಬಾಸೆಯಾದಾಗಲೆಲ್ಲ ನಾನೆಂದೋ ಓದಿದ "ಬಹಳ ಬುದ್ಧಿವಂತ"ನ ಕತೆ ನೆನಪಿಗೆ ಬರುತ್ತದೆ. ಜ್ಞಾನಾರ್ಜನೆಗಾಗಿ, ವಿವೇಕಸಾಧನೆಗಾಗಿ ಚೀನಾದೇಶದಿಂದ ಪ್ರಯಾಣಿಕನೊಬ್ಬ ಬಂದ ಭರತ ಖಂಡಕ್ಕೆ. ಹಿಯಾನ್‌ತ್ಸಾಂಗ್ ಎಂಬುದವನ ಹೆಸರು. ಉತ್ತರ ಮೇರುಗಿರಿಗಳೇನು, ಮರುಭೂಮಿಗಳೇನು; ಅವುಗಳನ್ನೆಲ್ಲ ದಾಟಿ ಬಂದ; ಅವನ ಜ್ಞಾನದಾಹವಂತಹುದು! ಭಾರತದಲ್ಲವನು ಬಹುಕಾಲವಿದ್ದ; ಇದ್ದಷ್ಟುಕಾಲ ನಲಂದಾ ಎಂಬ ಮಹಾಘಟಿಕಾಸ್ಥಾನದಲ್ಲಿ ತಾನು ಕಲಿತ, ಪರರಿಗೂ ಕಲಿಸಿದ. ನಲಂದಾ ಆಗ ಪಾಟಲೀಪುತ್ರದ ಬಳಿ ಇತ್ತು. ಈಗ ಅದನ್ನು ಪಾಟ್ನಾ ಎಂದು ಕರೆಯುವರು. ಹಿಯಾನ್‌ತ್ಸಾಂಗನು ವಿದ್ಯಾಪಾರಂಗತನಾದ 'ಧರ್ಮಜ್ಞ ಚಕ್ರೇಶ್ವರ' ನೆಂಬ ಬಿರುದನ್ನು ಪಡೆದ. ಅವನು ಆಸೇತು ಹಿಮಾಚಲ ಪ್ರವಾಸಮಾಡಿದ; ದೇಶವನ್ನೆಲ್ಲ ನೋಡಿದ. ಪೂರ್ವಕಾಲದಲ್ಲಿ ಈ ದೇಶದಲ್ಲಿ ವಾಸವಾಗಿದ್ದ ಜೀವನವನ್ನೆಲ್ಲ ಗ್ರಹಿಸಿದ. ಆಮೇಲೆ ತನ್ನ ಪ್ರವಾಸ ಕುರಿತೊಂದು ಪುಸ್ತಕವನ್ನು ಬರೆದ. ನನ್ನ ಮನಸ್ಸಿಗೆ ಬಂದ ಕತೆ ಈ ಪುಸ್ತಕದಲ್ಲಿದೆ. ದಕ್ಷಿಣ ದೇಶದಿಂದ ಕರ್ಣಸುವರ್ಣವೆಂಬ ನಗರಕ್ಕೆ ಒಬ್ಬ ಬಂದನಂತೆ, ಬಿಹಾರದಲ್ಲಿ ಈಗ ಭಾಗಲ್ಪುರವೆಂಬ ಊರಿದೆಯಲ್ಲ; ಅದರ ಬಳಿ ಇತ್ತಂತೆ ನಗರ. ಈ ಮನುಷ್ಯ ತನ್ನ ನಡುವಿಗೆ ತಾಮ್ರದ ಹಲಗೆಗಳನ್ನು ಬಿಗಿದಿದ್ದನಂತೆ. ತಲೆಯ ಮೇಲೊಂದು ಉರಿಯುವ ಪಂಜನ್ನು ಹೊತ್ತಿದ್ದನಂತೆ. ಶೋಭಾಯಮಾನವಾದ ಮುಖಮುದ್ರೆ, ಗಂಭೀರವಾದ ಗತಿ; ಕೈಲಿ ಕಟ್ಟಿಗೆ ಹಿಡಿದು, ಈ ವಿಚಿತ್ರ ವೇಷಧಾರಿ ಲೋಕಸಂಚಾರ ಮಾಡುತ್ತಿದ್ದಾನೆ. 'ಇದೇನು ವೇಷ'ವೆಂದು ಯಾರಾದರೂ ಕೇಳಿದರೆ "ನನ್ನ ಜ್ಞಾನವಷ್ಟಿದೆ. ಈ ತಾಮ್ರದ ರೇಕುಗಳನ್ನು ಬಿಗಿಸದೆಹೋದೆನಾದರೆ ನನ್ನ ಹೊಟ್ಟೆ

ಬಿರಿದೀತು. ನನ್ನ ಸುತ್ತ ಸುಳಿವ ಅಜ್ಞಾನಿಗಳ ಕಂಡೆನಗೆ 'ಅಯ್ಯೋ' ಅನಿಸುತ್ತದೆ. ಅವರೆಲ್ಲ ಕತ್ತಲೆಯಲ್ಲಿ ತಡವಿ ಆಡುತ್ತಿದ್ದಾರೆ. ಅವರಿಗಾಗಿ ನಾ ನನ್ನ ನೆತ್ತಿಯಮೇಲೆ ದೀಪ ಹೊತ್ತಿದ್ದೇನೆ" ಅನ್ನುವನು.

ಈ ಲೋಕ ವಿಸ್ತಾರ. ನಮ್ಮ ಈ ಲೋಕದಿಂದಾಚೆ ಅತ್ಯಾಶ್ಚರ್ಯಕರವಾದ, ದೃಗ್ಗೋಚರವಲ್ಲದ ಲೋಕಗಳೆಷ್ಟೋ. ಅಹಂಕಾರಿಯಂತೆ ನಾವೆಲ್ಲ ಜ್ಞಾನಭಂಡಾರಗಳು, ನಾವು ತಿಳಿದುಕೊಳ್ಳ ಬೇಕಾದದ್ದೇನೂ ಇಲ್ಲವೆಂಬ ಭಯದ ಕಲ್ಪನೆಗೆ ಕಾರಣವಿಲ್ಲ. ಅಂತಹವರು ಹೊಸ ವಿಷಯಗಳನ್ನು ತಿಳಿದುಕೊಳ್ಳುವುದರಿಂದಾಗುವ, ಶೋಧನೆಯಿಂದಾಗುವ ಆನಂದವನ್ನೇನು ಬಲ್ಲರು? ಆ ಮಹಾ ಸಾಹಸದ ಸುಖ ಅವರಿಗೇನು ಗೊತ್ತು?

ನೀನು ಹುಟ್ಟಿದ್ದು ೧೯೧೭ನೆಯ ವರ್ಷ. ಇತಿಹಾಸದೊಳಗದು ಮಹಾ ವರ್ಷ. ಆ ವರ್ಷ ಮಹಾನಾಯಕನೊಬ್ಬ ಬಂದ. ಬಡವರೆಂದರೆ, ನೋವು ತಿನ್ನುವವರೆಂದರೆ ಆತನ ಹೃದಯ ಪೂರ್ಣ ಪ್ರೇಮಪಾತ್ರ. ಆತನ ಸಹಾನುಭೂತಿ ಅತ್ಯಪೂರ್ವ. ಆತ ಬಂದು ತನ್ನ ಜನರಿಗೆಲ್ಲ "ಇತಿಹಾಸದಲ್ಲಿ ಉತ್ಕೃಷ್ಟವೂ, ಆಚಂದ್ರಾರ್ಕಸ್ಥಾಯಿಯೂ ಆದ ಅಧ್ಯಾಯವನ್ನು ಬರೆಯಿರಿ" ಎಂದು ಹೇಳಿ ಅವರ ಕೈಯಿಂದ ಬರೆಯಿಸಿದ. ನೀನು ಹುಟ್ಟಿದ ತಿಂಗಳಲ್ಲೇ ಲೆನಿನ್ ಮಹಾವಿಪ್ಲವ ಕಾರ್ಯವನ್ನಾರಂಭಿಸಿದ್ದು; ಆರಂಭಿಸಿ ರಷ್ಯಾ ಸೈಬೀರಿಯಾ ದೇಶಗಳ ರೂಪುರೇಖೆಗಳನ್ನೇ ಪರಿವರ್ತನಗೊಳಿಸಿಬಿಟ್ಟ. ಇಂದು ಭಾರತದಲ್ಲಿ ಮತ್ತೊಬ್ಬ ಮಹಾನಾಯಕ ಬಂದ; ಕಷ್ಟನಿಷ್ಠುರಗಳಿಗೆ ಸಿಕ್ಕಿದವರೆಂದರೆ ಆತನ ಪ್ರೇಮ ಅಪಾರ; ಅವರಿಗೆ ಸಹಾಯಮಾಡಲು ಉಗ್ರ ಆವೇಶದ ಆತುರ ಅವನಿಗೆ. ಆತ ನಮ್ಮ ಜನರಿಗೆಲ್ಲ ಮಹಾತ್ಕಾರ್ಯ ಸಾಧನೆಮಾಡಲೂ, ಗಂಭೀರ ಬಲಿದಾನಮಾಡಲು ಸ್ಫೂರ್ತಿಕೊಡುತ್ತಿದ್ದಾನೆ, ಬಲಿದಾನಮಾಡಿ ನಾವು ಸ್ವಾತಂತ್ರ್ಯಪಡೆಯಬೇಕು, ಹಸಿವಿನಿಂದ ಕೊರಗುತ್ತಿರುವವರು, ಬಡವರು, ಅನ್ಯಾಯಕ್ಕೆ ತುತ್ತಾದವರೇ ಮೊದಲಾದವರ ದುಃಖದ ಭಾರವಿಳಿಸಬೇಕು; ಇದು ಆತನಾಸೆ. ಬಾಪೂಜಿ ಈಗ ಸೆರೆಮನೆಯಲ್ಲಿದ್ದಾರೆ. ಆದರೇನು? ಅವರ ಸಂದೇಶದ ಯಕ್ಷಿಣಿಯು ಕೋಟ್ಯನುಕೋಟಿ ಭಾರತೀಯರ ಹೃದಯಗಳನ್ನು ಸೂರೆಗೊಂಡಿದೆ. ಗಂಡಸರು, ಹೆಂಗಸರು, ಮಕ್ಕಳು ಸಹ ತಮ್ಮ ಮುರುಕು ಗುಡಿಸಲುಗಳಿಂದ ಹೊರಬಿದ್ದು ಸ್ವಾತಂತ್ರ್ಯ ಸೈನಿಕರಾಗಿದ್ದಾರೆ. ಭಾರತದಲ್ಲಿ ನಾವಿಂದು ಚರಿತ್ರೆಯನ್ನು ನಿರ್ಮಿಸುತ್ತಿದ್ದೇವೆ. ನಾನು ನೀನು ಎಂಥಹ ಭಾಗ್ಯಶಾಲಿಗಳು, ನಡೆಯುತ್ತಿರುವುದನ್ನೆಲ್ಲ ನಮ್ಮ ಕಣ್ಣಾರೆ ನೋಡುತ್ತಿದ್ದೇವೆ. ಈ ಮಹಾನಾಟಕದಲ್ಲಿ ನಾನು ಸಹ ಕೊಂಚ ಪಾತ್ರವಹಿಸುತ್ತಿದ್ದೇನೆ. ಈ ಮಹೋದ್ಯಮದಲ್ಲಿ ಯಾವುದೇ ಪಾತ್ರ ದೊರೆಯಲಿ ಅಪಕೀರ್ತಿ ಬರುವಂಥಹ ಕಾರ್ಯವೊಂದನ್ನು, ಜನರಿಗೆ ಅವಮಾನವಾಗುವಂತಹ ಕೆಲಸವೊಂದನ್ನು ನಾವು ಮಾಡಲಾಗದು. ನಾವು ಭಾರತದ ಯೋಧರೆನಿಸುವುದಾದರೆ, ಭಾರತದ ಮಾನ ಮರ್ಯಾದೆ ನಮ್ಮ ಕೈಯಲ್ಲಿದೆ; ಆ ಮಾನ ಮರ್ಯಾದೆಯೂ ಪವಿತ್ರವಾದ ಧರ್ಮಸ್ಥೇಯ.

ಸರಿಯಾವುದು, ತಪ್ಪು ಯಾವುದೆಂದು ನಿರ್ಣಯಮಾಡುವುದು ಸುಲಭವಲ್ಲ. ನೀನು ರಹಸ್ಯದಲ್ಲಿ ಒಂದನ್ನೂ ಮಾಡಬೇಡ; ಮರೆಮಾಡಬೇಕೆಂದೆನಿಸುವ ಯಾವ ಕಾರ್ಯಕ್ಕೂ ಕೈಹಾಕಬೇಡ. ತೆರೆಯಮರೆಯಲ್ಲಿ ಕೆಲಸಮಾಡಬೇಕೆಂದು ನಿನಗೆ ಅನಿಸಿದರೆ ಭಯವಿದೆ ಎಂದರ್ಥ. ಭಯವು ಒಳ್ಳೆಯದಲ್ಲ; ನಿನಗೆ ಯೋಗ್ಯವಾದುದ್ದಲ್ಲ, ನಿರ್ಭಯವಾಗಿರು, ಆಗಬೇಕಾದುದ್ದೆಲ್ಲ ಆಗುತ್ತದೆ; ನಡೆಯಬೇಕಾದುದ್ದೆಲ್ಲ ನಡೆಯುತ್ತದೆ. ನೀನು ಧೈರ್ಯಶಾಲಿಯಾದರೆ ನಿನಗೆ ಭಯವಾಗುವುದಿಲ್ಲ. ತಲೆತಗ್ಗಿಸುವಂಥ ಕೆಲಸ ಮಾಡುವುದಿಲ್ಲ. ರಹಸ್ಯದಲ್ಲಿ ಒಂದು ಕೆಲಸವೂ ಬೇಡ; ಕಣ್ಮರೆಯ ಕೆಲಸ

ಬೇಡವೇಬೇಡ. ಏಕಾಂತವಿರಲಿ, ಇರಬೇಕು; ಏಕಾಂತಕ್ಕೂ ರಹಸ್ಯಕ್ಕೂ ವ್ಯತ್ಯಾಸವಿದೆ. ಪ್ರಿಯಾ! ನೀನು ಹಾಗೇ ಮಾಡಿದ್ದಾದರೆ ನೀನು ಜ್ಯೋತಿಯ ಮಗುವೆನಿಸುವೆ. ಏನೇಬಂದೊದಗಲಿ ನಿರ್ಭಯಳೆನಿಸುವೆ, ನಿರ್ಮಲೆ ಎನಿಸುವೆ, ನಿಶ್ಚಲಳೆನಿಸುವೆ. ಮಗೂ, ಇಂದಿಗಿಷ್ಟು ಸಾಕು. ನೀನು ದೊಡ್ಡವಳಾಗಿ ವೀರರಮಣಿಯೆನಿಸು; ಭಾರತಮಾತೆಯ ಸೇವೆ ಸಲಿಸು. ಪೂರ್ಣವಾತ್ಸಲ್ಯದಿಂದ ಹರಸುವೆನು.

## ಕೃತಿಕಾರರ ಪರಿಚಯ



ಭಾರತದ ಪ್ರಥಮ ಪ್ರಧಾನಿಗಳಾದ ಜವಹರಲಾಲ್ ನೆಹರುರವರು ತಮ್ಮ "ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟ್ರಿ" (Glimpses of world History) ಎಂಬ ಕೃತಿಯನ್ನು ಭಾರತದ ಸ್ವಾತಂತ್ರ್ಯದ ಹೋರಾಟದ ಕಾಲದಲ್ಲಿ ಬಂಧಿಯಾಗಿ ಬೇರೆಬೇರೆ ಸೆರೆಮನೆಗಳಲ್ಲಿ ವಾಸಮಾಡುವ ಸಂದರ್ಭದಲ್ಲಿ ತಮ್ಮ ಮಗಳಿಗೆ ಪತ್ರರೂಪದಲ್ಲಿ ಪ್ರಪಂಚದ ಇತಿಹಾಸ ಹಾಗೂ ಮಹಾನ್ ನಾಯಕರ ಪರಿಚಯವನ್ನು ಮಾಡಿಕೊಡುವ ಪ್ರಯತ್ನವಿದು. ಈ ಎಲ್ಲಾ ಪತ್ರಗಳನ್ನು ಸಂಗ್ರಹಿಸಿದ ಇವರ ತಂಗಿ ವಿಜಯಲಕ್ಷ್ಮಿ ಪಂಡಿತ್‌ರವರು ಪುಸ್ತಕರೂಪದಲ್ಲಿ ಪ್ರಕಟಿಸಿದರು. ಈ ಕೃತಿಯನ್ನು ತಿರುಮಲೆ ತಾತಾಚಾರ್ಯ ಶರ್ಮ ಅವರು ಹಾಗೂ ಸಿದ್ಧವನಹಳ್ಳಿ ಕೃಷ್ಣಶರ್ಮರವರು "ಜಗತ್ ಕಥಾವಲ್ಲರಿ" ಎಂಬ ಕೃತಿಯಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.



* * *

## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಈ ಪತ್ರವನ್ನು ನೆಹರುರವರು ಯಾರಿಗೆ ಬರೆದಿದ್ದಾರೆ?

೨. ಹೂಯಾನ್‌ತ್ಸಾಂಗ್ ಭರತಖಂಡಕ್ಕೆ ಏಕೆ ಬಂದನು?

೩. ನಲಂದ ವಿಶ್ವವಿದ್ಯಾನಿಲಯವು ಎಲ್ಲಿತ್ತು?

೪. ದಕ್ಷಿಣ ದೇಶದಿಂದ ಬಂದ ಯಾತ್ರಿಕ ಅವನ ವೇಷದ ಬಗ್ಗೆ ಏನು ಹೇಳುತ್ತಿದ್ದನು?

೫. ಬಾಪೂಜಿಯವರ ವ್ಯಕ್ತಿತ್ವದ ಬಗ್ಗೆ ನೆಹರೂರವರು ಏನು ಹೇಳಿದ್ದಾರೆ?

೬. ತೆರೆಮರೆಯಲ್ಲಿ ಕೆಲಸ ಮಾಡಿದರೆ ಯಾವ ಅರ್ಥ ಬರುತ್ತದೆ?

✦ ✦ ✦ ✦ ✦

# ೫. ಆಟೋರಿಕ್ಷಾದ ರಸಪ್ರಸಂಗಗಳು

**– ಎಚ್. ನರಸಿಂಹಯ್ಯ**

ಬೆಂಗಳೂರಿನಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆ ಹೋಗುವುದೇ ಒಂದು ಪ್ರಯಾಸದ ಕೆಲಸ. ಕಾರ್ ಇರುವ ಕೆಲವೇ ಮಂದಿಗೆ, ಸ್ಕೂಟರಿರುವ ಸಾಕಷ್ಟು ಮಂದಿಗೆ ಇದೇನು ಅಂತಹ ಸಮಸ್ಯೆ ಅಲ್ಲ. ಆದರೆ ನನ್ನಂತಹವನಿಗೆ ಇದೊಂದು ತಾಪತ್ರಯದ ಕೆಲಸ. ಸಮೀಪದ ಸ್ಥಳಗಳಿಗೆ ಹೋಗುವಾಗ ನಾನು ಸಾಮಾನ್ಯವಾಗಿ ನಡೆದೇ ಹೋಗುತ್ತೇನೆ. ಸಾಕಷ್ಟು ಕಾಲಾವಕಾಶ ಇಲ್ಲದೇ ಹೋದರೆ ನನಗಿರುವ ಮಾರ್ಗಗಳು ಎರಡು. ಒಂದು ಬಸ್ ಅಥವಾ ಆಟೋರಿಕ್ಷಾ. ಬಸ್‌ಗಳ ಟೈಮ್ ಅನಿಶ್ಚಿತ ಹಾಗೂ ತುಂಬಾ ಕಾಯಬೇಕಾಗಿದ್ದು ಆ ನೂಕುನುಗ್ಗಲಲ್ಲಿ ಬಸ್ ಸಂಚಾರ ಬಹಳ ದುಸ್ತರ.





ಇನ್ನು ಉಳಿದಿರುವುದು ಒಂದೇ ಮಾರ್ಗ, ಆಟೋರಿಕ್ಷಾ. ನನಗೆ ಆಟೋರಿಕ್ಷಾ ಕಂಡರೆ ತುಂಬಾ ಭಯ. ಅವು ಪಾದರಸದಂತೆ ಚಲಿಸುತ್ತವೆ. ಆದರೆ ಒಂದು ವ್ಯತ್ಯಾಸ. ಪಾದರಸ ತಗ್ಗಿದ್ದ ಕಡೆ ಹೋಗುತ್ತೆ, ಆಟೋರಿಕ್ಷಾಕ್ಕೆ ಅಂತಹ ಸೀಮಿತ ಅಭ್ಯಾಸ, ಉದ್ದೇಶವಿಲ್ಲ. ತಗ್ಗು ಉಬ್ಬುಗಳ ಭೇದಭಾವವಿಲ್ಲದೆ, ಲಂಗುಲಗಾಮಿಲ್ಲದ ಕುದುರೆಯಂತೆ ಧಾವಿಸುತ್ತದೆ.

ನನಗೆ ಜೀವದ ಮೇಲೆ ತುಂಬಾ ಆಸೆ. ಬಹಳ ವರ್ಷ ಆರೋಗ್ಯವಾಗಿ ಬದುಕಬೇಕೆಂಬ ಹಂಬಲ ಚಪಲ. ಆಟೋರಿಕ್ಷಾ ಪ್ರಯಾಣದಿಂದ ಎರಡು ವಿಧವಾದ ಅಪಘಾತಗಳಾಗಬಹುದು. ಮೊದಲನೆಯದಾಗಿ ಕೈಕಾಲು ಮುರಿಯಬಹುದು. ಎರಡನೆಯದಾಗಿ ಅಲ್ಲಿಯೇ ಕೊನೆಯ ಉಸಿರೆಳೆಯಬಹುದು. ಬಹು ವರ್ಷ ಬದುಕಬೇಕೆಂಬ ಉತ್ಕಟ ಆಸೆ ಇದ್ದರೂ, ಕೈಕಾಲು ಮುರಿದುಕೊಂಡು ಮೂಳೆ ವೈದ್ಯರ ಕೈಗೆ ಸಿಕ್ಕಿ ದೇಹದಲ್ಲಿ ನಟ್ಟೂ, ಬೋಲ್ಟೂ ಹಾಕಿಸಿಕೊಂಡು

ಬದುಕುವುದಕ್ಕಿಂತ ಅಲ್ಲಿಯೇ ಭಗವಂತನ ಪಾದಾರವಿಂದವನ್ನು ಸೇರುವುದೇ ಲೇಸು ಎಂದು ನನ್ನ ಅಭಿಪ್ರಾಯ. ಇದೆಲ್ಲವನ್ನೂ ಗಮನದಲ್ಲಿ ಇಟ್ಟುಕೊಂಡು ಅಪಘಾತಗಳಿಂದ ಪಾರಾಗಲು ನನಗೆ ತೋಚಿದ ಎಲ್ಲಾ ಮುಂಜಾಗ್ರತೆ ಕ್ರಮಗಳನ್ನೂ ತೆಗೆದುಕೊಳ್ಳುತ್ತೇನೆ. ಆಟೋರಿಕ್ಷಾ ಪ್ರಯಾಣ ನನಗೆ ವಿಧವಿಧವಾದ ಅನುಭವಗಳನ್ನು ತಂದುಕೊಡುತ್ತದೆ.

ಆಟೋರಿಕ್ಷಾ ಹತ್ತುವುದಕ್ಕಿಂತ ಮುಂಚೆ "ಸ್ವಲ್ಪ ನಿಧಾನವಾಗಿ ಓಡಿಸಪ್ಪ, ಇನ್ನೂ ೫೦ ಪೈಸೆ ಜಾಸ್ತಿ ಕೊಡುತ್ತೇನೆ. ನನಗೆ ವಯಸ್ಸಾಗಿದೆ, ಎತ್ತಿಹಾಕುವುದನ್ನು ತಡೆದುಕೊಳ್ಳಲು ಆಗುವುದಿಲ್ಲ" ಅಂತ ಒಮ್ಮೆ ಅಂದೆ. "ರೀ ಸ್ವಾಮಿ, ಸುಮ್ಮನೆ ಕುಳಿತುಕೊಳ್ಳಿ. ನಿಮ್ಮಂತವರಿಂದಲೇ ಆಕ್ಸಿಡೆಂಟ್ ಆಗುವುದು. ಹತ್ತುವುದಕ್ಕಿಂತ ಮುಂಚೇನೆ ಅಪಶಕುನ" ಎಂದು ಸಿಡುಕಿ ಗಾಡಿ ಸ್ಟಾರ್ಟ್ ಮಾಡಿದ. ಇನ್ನೊಂದು ಸಲ ಇನ್ನೊಬ್ಬ ಚಾಲಕ "ಸ್ವಾಮಿ ನಿಶ್ಚಿಂತೆಯಾಗಿ ಕುಳಿತುಕೊಳ್ಳಿ, ಏನು ಭಯಪಡಬೇಡಿ. ಆಗೋದನ್ನು ಯಾರೂ ತಪ್ಪಿಸಲು ಸಾಧ್ಯವಿಲ್ಲ. ಎಲ್ಲಾ ಹಣೇಬರಹ. ಹೋಗಬೇಕೂಂತ ಇದ್ದರೆ ಎಷ್ಟೇ ನಿಧಾನವಾಗಿ ಓಡಿಸಿದರೂ ಅನಾಹುತ ಆಗೇ ಆಗುತ್ತದೆ. ಮನೆಯಲ್ಲಿ ಮಲಗಿದ್ದಾಗ ಆಯುಸ್ಸು ಮುಗಿದರೆ ಹಾಗೇ ಹೋಗುತ್ತದೆ." ಎಂದು ನಿರರ್ಗಳವಾಗಿ ಈ ಧರ್ಮಭೂಮಿಯ ಸಂಜಾತರಲ್ಲಿ ರಕ್ತಗತವಾಗಿರುವ ಕರ್ಮಸಿದ್ಧಾಂತವನ್ನು ಬೋಧಿಸಲು ಮೊದಲು ಮಾಡಿದ. ಅಪಘಾತಕ್ಕೆ ನಾವಾಗಲೀ, ವೇಗವಾಗಲೀ ಕಾರಣವಲ್ಲ. ಇದೆಲ್ಲಾ ವಿಧಿಲಿಖಿತ ಎಂಬ ಅಪಾಯ ಸಿದ್ಧಾಂತವನ್ನು ಕೇಳಿ ನನಗೆ ಇನ್ನೂ ಭಯವಾಯಿತು. ಈ ವೇದಾಂತಿಯ ಹಿಡಿತದಿಂದ ಕ್ಷೇಮವಾಗಿ ಪಾರಾದರೆ ಪುನರ್ಜನ್ಮ ಬಂದ ಹಾಗೆ ಎಂದುಕೊಂಡು ಇನ್ನು ಹೆಚ್ಚು ಮಾತಾಡದೆ ಜೀವವನ್ನು ಕೈಲಿ ಹಿಡಿದುಕೊಂಡು ಕುಳಿತುಕೊಂಡೆ.

ಮತ್ತೊಬ್ಬ ಆಟೋರಿಕ್ಷಾ ಚಾಲಕ "ಅಯ್ಯೋ! ಕುಳಿತುಕೊಳ್ಳಿ ಸ್ವಾಮಿ. ನಿಮಗೆ ಒಬ್ಬರಿಗೇನೆ ಜೀವದ ಮೇಲೆ ಆಸೆ ಇದೆ ಎಂದು ತಿಳಿದುಕೊಳ್ಳಬೇಡಿ. ನಮಗೂ ಇದೆ. ನಮಗೂ ಹೆಂಡತಿ ಮಕ್ಕಳು ಇದ್ದಾರೆ" ಎಂದು ಸಮಾಧಾನಪಡಿಸಿದ. "ನನಗೆ ಯಾವ ಹೆಂಡತಿ ಮಕ್ಕಳೂ ಇಲ್ಲಪ್ಪ. ನಿನಗೆ ಇದ್ದಾರೆ ಅಂತಲೇ ಅವರ ಯೋಗಕ್ಷೇಮಕ್ಕಾಗಿಯೇ ನಾನು ನಿನಗೆ ಎಚ್ಚರಿಕೆ ಕೊಟ್ಟೆ" ಎಂದು ಹೇಳಿದೆ.

ಇನ್ನೊಂದು ಸಲ ಒಬ್ಬ ಆಟೋ ಚಾಲಕ ಕೇಳಿದ : "ಏನು ಸ್ವಾಮಿ, ಈ ವೇಗಕ್ಕೇನೇ ಭಯಪಡುತ್ತೀರಿ. ನೀವು ಅಮೆರಿಕಾಕ್ಕೆಲ್ಲಾ ಹೋಗಿದ್ದಿರಿ ಅಂತ ಕೇಳಿದ್ದೇನೆ, ವಿಮಾನದಲ್ಲಿ ಹೋಗುವಾಗ ನಿಮಗೆ ಭಯವಾಗಲಿಲ್ಲವೇ" ಎಂದು ಪ್ರಶ್ನಿಸಿದ. "ಇಲ್ಲಪ್ಪ, ನನಗೇನೂ ಅಲ್ಲಿ ಭಯವಾಗುವುದಿಲ್ಲ. ಯಾಕೆಂದರೆ ವಿಮಾನಕ್ಕೆ ಯಾವಾಗಲೂ ಎಮ್ಮೆ, ಹಸು, ಜನ ಅಡ್ಡ ಬರಲಿಲ್ಲ. ಜೊತೆಗೆ ವಿಮಾನವನ್ನು ಓವರ್‌ಟೇಕ್ ಮಾಡಿದ ಪ್ರಸಂಗವೂ ಇಲ್ಲ" ಅಂದೆ. "ಕರೆಕ್ಟ್ ಸಾರ್ ನೀವು ಹೇಳಿದ್ದು" ಎಂದು ಒಪ್ಪಿದ. ಇನ್ನೊಂದು ಸಲ ಇನ್ನೊಬ್ಬ "ಸಾರ್, ನೀವು ಆ ಶಿವ

ಬಾಲಯೋಗಿಗೆ ಸರಿಯಾದ ಸವಾಲ್ ಹಾಕಿದಿರಿ. ಆತನ ಪ್ರಾರ್ಥನೆಯಿಂದ ಬರೋ ಮಳೆಯೂ ತಪ್ಪಿಹೋಯಿತು. ನೀವು ಹಿಂದೆ ಆ ಸಾಯಿಬಾಬಾಗೂ ಹೀಗೆ ಬುದ್ಧಿ ಕಲಿಸಿದಿರಿ." ಎಂದು ನಮ್ಮ ದೇಶದ ಯೋಗಿ, ಬಾಬಾಗಳನ್ನು ಸಾಕಷ್ಟು ಕಠಿಣ ಶಬ್ದಗಳಲ್ಲಿ ವರ್ಣಿಸಿದ.

ಒಂದು ಸಲ ವಿಧಾನಸೌಧದ ಬಳಿ ಆಟೋಗಾಗಿ ಪರದಾಡುತ್ತಿದ್ದೆ. ದೂರದಲ್ಲಿ ಹೋಗುತ್ತಿದ್ದ ಒಬ್ಬ ಆಟೋಚಾಲಕರು ನಾನಿದ್ದ ಕಡೆ ಬಂದರು. "ಏನ್‌ಸಾರ್, ನೀವು ನರಸಿಂಹಯ್ಯನವರಲ್ಲವೆ? ಆಟೋ ಬೇಕೆ? ಎಲ್ಲಿಗೆ ಹೋಗಬೇಕು?" ಎಂದು ತುಂಬಾ ವಿಶ್ವಾಸದಿಂದ ಕೇಳಿದರು. ನನಗಂತೂ ಪರಮಾಶ್ಚರ್ಯವಾಯಿತು. ಹಿಂದಿನ ಕಹಿ ಅನುಭವಗಳಿಗಿಂತ ತೀರ ಭಿನ್ನವಾದ ಅನುಭವ. "ಬಸವನಗುಡಿ ನ್ಯಾಷನಲ್ ಕಾಲೇಜಿಗೆ ಹೋಗಬೇಕಪ್ಪಾ" ಎಂದೆ. "ಕುಳಿತುಕೊಳ್ಳಿ" ಅಂದರು. "ಏನ್ ಸಾರ್, ನೀವು ವೈಸ್ ಚಾನ್ಸಲರ್ ಆಗಿದ್ದೀರಿ, ಎಂ.ಎಲ್.ಸಿ. ಆಗಿದ್ದೀರಿ, ಒಂದು ಕಾರ್ ಇಟ್ಟುಕೊಳ್ಳೋದಕ್ಕೆ ಆಗಲಿಲ್ಲವೇ? ಈ ವಯಸ್ಸಿನಲ್ಲಿ ಈ ಬಿಸಿಲಿನಲ್ಲಿ ಆಟೋ ಹುಡುಕುತ್ತಿದ್ದೀರಿ. ಯಾರು ಯಾರೋ ಕಾರ್ ಇಟ್ಟುಕೊಂಡಿದ್ದಾರೆ" ಎಂದು ತನ್ನ ಆಗ್ರಹ ಅನುಕಂಪವನ್ನು ವ್ಯಕ್ತಪಡಿಸಿದರು. "ನನಗೆ ಅವಶ್ಯಕತೆಯೂ ಇಲ್ಲ, ನನ್ನಲ್ಲಿ ದುಡ್ಡೂ ಇಲ್ಲಪ್ಪ" ಅಂದೆ. "ಇದು ಅಯೋಗ್ಯರಿಗೆ ಕಾಲಾ ಸಾರ್" ಎಂಬುದಾಗಿ ಹೇಳಿ ಅದೇ ಧಾಟಿಯಲ್ಲಿಯೇ ಮುಂದುವರೆದು ಸಾರ್ವಜನಿಕ ಕ್ಷೇತ್ರದ ಆಯಕಟ್ಟಿನಲ್ಲಿ ಕುಳಿತಿರುವ ಎಲ್ಲಾ 'ಸೇವಕ'ರನ್ನೂ ವಾಚಾಮಗೋಚರವಾಗಿ ಬೈದುಕೊಂಡು ಬಂದರು.

ಒಂದು ಸಂಜೆ ಜಯನಗರದಲ್ಲಿರುವ ನ್ಯಾಷನಲ್ ಕಾಲೇಜಿನಲ್ಲಿ ಒಂದು ಕಾರ್ಯಕ್ರಮವಿತ್ತು. ಅದು ಮುಗಿಯುವುದು ರಾತ್ರಿ ೧೦ ಘಂಟೆಯಾಯಿತು. ಆಟೋಗಾಗಿ ಕಾಲೇಜಿನ ಹತ್ತಿರ ಅಲ್ಲಿಯ ಕೆಲವು ಉಪಾಧ್ಯಾಯರೊಂದಿಗೆ ಕಾದು ನಿಂತಿದ್ದೆ. "ಇಷ್ಟು ಹೊತ್ತಿನಲ್ಲಿ ಹಾಸ್ಟೆಲ್‌ನಲ್ಲಿ ಊಟ ಇರುವುದಿಲ್ಲ; ಆದುದರಿಂದ ನಮ್ಮ ಮನೆಗೆ ಬಂದು ಊಟಮಾಡಿಕೊಂಡು ಹೋಗಿ" ಎಂದು ಒಬ್ಬಿಬ್ಬ ಉಪಾಧ್ಯಾಯರು ಒತ್ತಾಯಪಡಿಸುತ್ತಿದ್ದರು. "ಪರವಾಗಿಲ್ಲ, ಒಂದು ಹೊತ್ತು ಊಟ ಇಲ್ಲದೇ ಇದ್ದರೆ ಚಿಂತೆ ಇಲ್ಲ. ತುಂಬಾ ಹೊತ್ತಾಗಿದೆ" ಎಂದು ಹೇಳಿ ಅಲ್ಲಿಂದ ಹೊರಟೆ. ಆಟೋ ಚಾಲಕರು ಸ್ವಲ್ಪ ವಯಸ್ಸಾದವರು. ಇದನ್ನೆಲ್ಲಾ ಸಾವಧಾನವಾಗಿ ಕೇಳುತ್ತಿದ್ದರು. 'ಯಾಕೆ ಸಾರ್, ನಿಮಗೆ ಮನೆ ಇಲ್ಲವೇ? ಊಟ ಇಲ್ಲದೇ ಇದ್ದರೂ ಪರವಾಗಿಲ್ಲ ಅಂತ ಹೇಳುತ್ತಿದ್ದೀರಿ" ಎಂದು ಕೇಳಿದರು. "ಇಲ್ಲಪ್ಪ, ನನಗೆ ಮನೆ-ಗಿನೆ ಇಲ್ಲ, ನ್ಯಾಷನಲ್ ಕಾಲೇಜ್ ಹಾಸ್ಟೆಲಿನಲ್ಲಿದ್ದೇನೆ" ಅಂದೆ. "ಇಷ್ಟು ಹೊತ್ತಿನಲ್ಲಿ ಉಪವಾಸ ಮಲಗಿಕೊಳ್ಳಬಾರದು ಸಾರ್. ವಿಶ್ವೇಶ್ವರಪುರದಲ್ಲಿರುವ ಸಜ್ಜನರಾವ್ ಸರ್ಕಲ್‌ಗೆ ಹೋಗೋಣ ಬನ್ನಿ. ಅಲ್ಲಿ ಇಡ್ಲಿ ಮಾರುತ್ತಾರೆ. ನೀವು ಇಡ್ಲಿ ತಿನ್ನುವ ತನಕ ಕಾಯುತ್ತೇನೆ" ಎಂದು ತುಂಬಾ ಆತ್ಮೀಯವಾಗಿ ವಿನಂತಿಸಿಕೊಂಡ. "ತುಂಬಾ ಥ್ಯಾಂಕ್ಸ್, ನಿಮ್ಮಂತಹವರು ಬಹಳ ಅಪರೂಪ. ಆಟೋದವರಿಗೆ ಮಾನವೀಯತೆ ಇಲ್ಲ ಎಂದು ಹೇಳುತ್ತಾರೆ. ನೀವು ಅದಕ್ಕೆ ಅಪವಾದ" ಎಂದು ವಂದಿಸಿದೆ.

## ಕೃತಿಕಾರರ ಪರಿಚಯ



ಡಾ॥ ಎಚ್. ಎನ್. ಎಂದೇ ಜನಪ್ರಿಯರಾದ ಹೊಸೂರು ನರಸಿಂಹಯ್ಯನವರು ಜೂನ್ ೬-೧೯೨೦ ರಂದು ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ, ಹೊಸೂರು ಗ್ರಾಮದಲ್ಲಿ ಒಂದು ಬಡ ಹಿಂದುಳಿದ ಕುಟುಂಬದಲ್ಲಿ ಜನಿಸಿದರು. ತಂದೆ ಹನುಮಂತಪ್ಪ ತಾಯಿ ವೆಂಕಟಮ್ಮ. ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಹೊಸೂರಿನಲ್ಲಿ ಮುಗಿಸಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರದ ಬಿ.ಎಸ್ಸಿ. ಮತ್ತು ಎಂ.ಎಸ್ಸಿ. ಪದವಿಗಳಲ್ಲಿ ಉನ್ನತ ದರ್ಜೆಯಲ್ಲಿ ತೇರ್ಗಡೆಯಾಗಿ ಬಸವನಗುಡಿ ಕಾಲೇಜಿನಲ್ಲಿ ಭೌತಶಾಸ್ತ್ರ ಅಧ್ಯಾಪಕರಾಗಿ ಹಾಗೂ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಬೆಂಗಳೂರಿನ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದರು. ಇವರು 'ಪದ್ಮಭೂಷಣ' ಪ್ರಶಸ್ತಿ ಪಡೆದಿದ್ದಾರೆ. ಅನೇಕ ವೈಚಾರಿಕ ಲೇಖನಗಳನ್ನು ಬರೆದಿದ್ದಾರೆ. ಮತ್ತು 'ತೆರೆದ ಮನ' ಮತ್ತು 'ಹೋರಾಟದ ಹಾದಿ' ಇವರ ಕೃತಿಗಳು.



## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಬೆಂಗಳೂರಿನ ಸಂಚಾರದ ಬಗ್ಗೆ ಲೇಖಕರ ಅಭಿಪ್ರಾಯವೇನು?

೨. ದೇಹಕ್ಕೆಲ್ಲ ನಟ್ಟು ಬೋಲ್ಟ್ ಹಾಕಿಸಿಕೊಳ್ಳುವುದಕ್ಕಿಂತ ಯಾವುದು ಲೇಸು?

೩. ಸಿಡುಕಿನಿಂದ ಆಟೋ ಸ್ಟಾರ್ಟ್ ಮಾಡಿದ ಆಟೋ ಚಾಲಕ ಏನೆಂದು ಹೇಳಿದ?

೪. ಲೇಖಕರಿಗೆ ವಿಮಾನ ಯಾನದ ಬಗ್ಗೆ ಭಯವಿಲ್ಲವೇಕೆ?

೫. ಪ್ರಾರ್ಥನೆಯಿಂದ ಮಳೆಬರಿಸುವುದಾಗಿ ಹೇಳಿದ್ದವನಾರು?

೬. ಆಟೋ ಚಾಲಕರಲ್ಲಿಯೂ ಮಾನವೀಯತೆಯನ್ನರಿತ ಪ್ರಸಂಗದ ಬಗ್ಗೆ ತಿಳಿಸಿ.

